'ಸಾರಥಿ ಪ್ರಕಾಶನ'ದವರ ಮುಂದಿನ ಪ್ರಕಟನೆಗಳು

ಮಾ. ಭಿ. ಶೇಷಗಿರಿರಾವ್‌ರವರ

## ಓಡಿಹೋದ ಹೆಣ

ಎನ್. ನರಸಿಂಹಯ್ಯ ವಿರಚಿತ

## ಪಂಡಿತನ ಪಲಾಯನ

## ವಿವೇಕಿಯಾದ ವಂಚಕ

ಎಸ್. ಎನ್. ಗುರುರಾಜಾಚಾರ್ಯರ

## ಸುಂದರಿಯ ಸೇಡು

ಬಿ. ಕೆ. ಸುಂದರರಾಜ್‌ರವರ

## ಪಾರ್ಸಿ ಹುಡುಗಿ

★

ಎಂ. ಜಿ. ರಾಜಶೇಖರ್ ಮತ್ತು ಎಂ. ಆರ್. ರಾಘವೇಂದ್ರರವರ

## ಕಡೆಯ ಕೊಲೆ

★

ಅಧಿಕೃತ ಮಾರಾಟಗಾರರು :
**ಗೀತಾ ಏಜನ್ಸೀಸ್,**
ಸೌರಾಷ್ಟ್ರಪೇಟೆ, ಬೆಂಗಳೂರು ೨.

" ಬಹುಮಾನ—ಐದು ಸಹಸ್ರ ರೂಪಾಯಿ ಬಹುಮಾನ."

" ಹತ್ತೊಂಬತ್ತು ವರ್ಷದ ಸುಂದರಿ ಯುವತಿ–ನೀಲೀಸೀರೆಯನ್ನುಟ್ಟು ಕೊಂಡಿದ್ದಾಳೆ.

"ಈ ಯುವತಿ ಅತ್ಯಂತ ಭೀಕರ ಕೊಲೆಯನ್ನು ಮಾಡಿದ್ದಾಳೆ. ಕೊಲೆ ಪಾತಕಿಯನ್ನು ಹುಡುಕಿ ಕೊಟ್ಟವರಿಗೆ ಐದು ಸಹಸ್ರ ರೂಪಾಯಿ ಬಹುಮಾನ !"

—ಪೋಲೀಸ್ ಠಾಣೆಗಳ ಮುಂದೆ, ರೈಲ್ವೆ ಸ್ಟೇಷನ್ನುಗಳಲ್ಲಿ, ಎಲ್ಲಿ ಹತ್ತು ಜನ ಸೇರುತ್ತಾರೋ ಅಲ್ಲೆಲ್ಲಾ ದೊಡ್ಡದೊಡ್ಡ ಅಕ್ಷರಗಳಲ್ಲಿ ಈ ಸುದ್ದಿಯು ಭಿತ್ತಿ ಪತ್ರಿಕೆಯನ್ನು ಹಚ್ಚಿಸಲಾಗಿದ್ದಿತು.

1942ನೇ ಇಸವಿ ಜೂನ್ ಒಂಭತ್ತನೆ ತಾರೀಕು, ಬೊಂಬಾಯಿಸಿಂದ ಬೆಂಗಳೂರಿಗೆ ಬರುತ್ತಿದ್ದ ಜನತಾ ಎಕ್ಸ್‌ಪ್ರೆಸ್‌ನಲ್ಲಿ ಆ ಕೊಲೆ ನಡೆದಿದ್ದು.

ಕೊಲೆಯಾದ ವ್ಯಕ್ತಿ ಕಾಶ್ಮೀರದ ಸುಪ್ರಸಿದ್ಧ ಶ್ರೀಮಂತ. ಶ್ರೀನಗರದಲ್ಲಿ ಅವನು ವಾಸಮಾಡುತ್ತಿದ್ದುದು. ಅವನ ಹೆಸರು ಮೋಹನ್‌ಚಂದ್. ಶ್ರೀನಗರದ ಅತ್ಯಂತ ಶ್ರೀಮಂತರ ಸಾಲಿನಲ್ಲಿ ಮೋಹನ್‌ಚಂದ್‌ನ ಹೆಸರು ಸೇರಿತ್ತು. ಅವನ ಆಸ್ತಿ ಸುಮಾರು ಒಂದುವರೆ ಲಕ್ಷ ರೂಪಾಯಿ. ಶ್ರೀನಗರದಲ್ಲಿದ್ದ ಮನೆ, ಮಳಿಗೆ ಎಲ್ಲವನ್ನು ಮಾರಿ ತನ್ನ ವಾಸಸ್ಥಾನವನ್ನು ಬೆಂಗಳೂರಿಗೆ ಬದಲಾಯಿಸಲು ನಿಶ್ಚಯಿಸಿದ. ಸಕಲ ಸ್ವತ್ತನ್ನು ಮಾರಿ, ಬರುವಾಗ ಗುರುತಿಗಾಗಿ " ಜೈ ಪ್ರಕಾಶ್ " ಎಂಬ ಒಂದು ಅಮೂಲ್ಯ ವಜ್ರವನ್ನು ಕೊಂಡುಕೊಂಡ. " ಜೈ ಪ್ರಕಾಶ್ " ಎಂಬ ಹೆಸರಿನ ವಜ್ರದ ಬೆಲೆ ಐವತ್ತುಸಾವಿರ ರೂಪಾಯಿ. ಭಾರತದ ಇತರ ಸಂಸ್ಥಾನಗಳಲ್ಲಿ ಅದರ ಬೆಲೆ ಎಂಬತ್ತುಸಾವಿರ ರೂಪಾಯಿ ನಷ್ಟು ಇತ್ತು. ಆ ವಜ್ರವನ್ನು ತೆಗೆದುಕೊಂಡು ಮೋಹನ್‌ಚಂದ್ ಬೊಂಬಾಯಿಗೆ ಬಂದ.

ಬೊಂಬಾಯಿನಲ್ಲಿ ತನ್ನ ಹಣವನ್ನೆಲ್ಲಾ ಬ್ಯಾಂಕಿಗೆ ಹಾಕಿದ. ವಜ್ರ ವನ್ನು ಮಾತ್ರ ತನ್ನ ಬಳಿಯಲ್ಲಿಯೇ ಇಟ್ಟುಕೊಂಡಿದ್ದ. ಆ ವಜ್ರ ಬಹಳ ಅಪಾಯಕಾರಿಯಾದುದು ಎಂಬ ವಿಷಯ ಮೋಹನ್‌ಚಂದ್‌ಗೆ ತಿಳಿದಿದ್ದಿತು. ಆ ವಜ್ರ ಅನೇಕ ಭಾರಿ ಕೈಯಿಂದ ಕೈಗೆ ಬದಲಾಯಿಸಿ, ಹೆಚ್ಚು ದಿನ ಇದ್ದ ಕಡೆ ಒಂದು ಕೊಲೆಯನ್ನು ಮಾಡಿಸಿ, ಮಾಡುತ್ತಾ, ಮತ್ತೆ ಮಾಯವಾಗುತ್ತಾ, ಹೇಗೋ ಬಂದು ಮೋಹನ್‌ಚಂದ್‌ನ ಕೈ ಸೇರಿತ್ತು. ಆ ವಜ್ರವನ್ನು ಹೆಚ್ಚು ದಿನ ಇಟ್ಟುಕೊಳ್ಳುವುದು ಮೋಹನ್‌ಚಂದ್‌ಗೆ ಇಷ್ಟವಿರಲಿಲ್ಲ. ಆ ವಜ್ರ ಕೈಯಲ್ಲಿದ್ದಷ್ಟು ದಿನವು ಪ್ರಾಣಭಯವಿದ್ದೇ ಇರುತ್ತದೆ. ಆ ವಜ್ರ ಯಾರಬಳಿ ಯಲ್ಲಿರುತ್ತದೆಯೋ ಅವರ ಬೆನ್ನಿಗೆ ಭೇತಾಳ ಹತ್ತುತ್ತದೆ. ಮೋಹನ್‌ಚಂದ್ "ಆಕಾಶದೂತ" ವಿಮಾನದಿಂದ ಶ್ರೀನಗರದಿಂದ ಬೊಂಬಾಯಿನಲ್ಲಿ ಇಳಿದಾಗಲೇ ಚುಟ್ಟಾಧಾರಿ ವ್ಯಕ್ತಿಯೊಬ್ಬ ಚಂದ್‌ನ ಬೆನ್ನು ಹತ್ತಿದ. ಐದಾರುಬಾರಿ ಅವನನ್ನು ಇವರು ನೋಡಿದ್ದರು.

1942 ನೇ ಇಸವಿ ಜೂನ್ ಒಂಭತ್ತನೇ ತಾರೀಕು ರಾತ್ರಿ ಜನತಾ ಎಕ್ಸ್‌ಪ್ರೇಸ್ಸ್‌ನಲ್ಲಿ ಬೊಂಬಾಯಿನಿಂದ ಬೆಂಗಳೂರಿಗೆ ಹೊರಟರು. ಅವರು ಕುಳಿತ್ತಿದ್ದುದು ಏರ್ ಕಂಡಿಷನ್ಡ್ ಕಾಲೇಜಿನಲ್ಲಿ. ಅವರ ಕ್ಯಾರೇಜಿನಲ್ಲಿ ಇದ್ದವರು ಇಬ್ಬರೇ ಪ್ರಯಾಣಿಕರು. ಒಬ್ಬಳು ಹತ್ತೊಂಭತ್ತು ವರುಷದ ಸುಂದರ ಯುವತಿ. ಮತ್ತೊಬ್ಬ ಅರವತ್ತು ವರ್ಷದ ಹಣ್ಣು ಹಣ್ಣು ಮುದುಕ

ಬೆಂಗಳೂರು ತಲುಪಲು ಆರು ಮೈಲುಗಳಿವೆ—ಎನ್ನುವಾಗ ಮೋಹನ್ ಚಂದ್‌ರ ಹೃದಯದಲ್ಲಿ ಮೂರು ಗುಂಡುಗಳು ಹೊಕ್ಕವು. ಯಾರೋ ಸರಪಳಿಯನ್ನೆಳೆದು ರೈಲು ನಿಲ್ಲಿಸಿದರು.

ರೈಲಿನಿಂದ ಒಬ್ಬ ಯುವತಿ ಓಡಿಹೋದಳು. ರೈಲ್ವೆ ಲೈನಿಗೆ ಪಕ್ಕದಲ್ಲಿ ಬರುತ್ತಿದ್ದ ಕಾರಿನಲ್ಲಿ ಕುಳಿತುಕೊಂಡಳು. –ಕಾರು ಹೊರಟು ಹೋಯಿತು.

ಮೋಹನ್‌ಚಂದ್‌ರ ಶವದ ಪಕ್ಕದಲ್ಲಿ ಒಂದು ವ್ಯಾನಿಟಿಬ್ಯಾಗ್ ಇದ್ದಿತು ಅದರಲ್ಲಿ ಒಂದು ಸುಂದರವಾದ ಭಾವಚಿತ್ರವಿದ್ದಿತು. ಆ ಭಾವಚಿತ್ರದ ಯುವತಿಯೇ ಕೊಲೆಪಾತಕಿ ಎಂದು ಪೋಲೀಸರು ಊಹಿಸಿದರು.

ಸರಿ, ದೊಡ್ಡದೊಡ್ಡ ಅಕ್ಷರಗಳಲ್ಲಿ ಪೋಸ್ಟರುಗಳು ಪ್ರಕಟವಾದವು. ಆ ಯುವತಿಯ ಫೋಟೋ ಪತ್ರಿಕೆಗಳ ಮುಖಪುಟದಲ್ಲಿ ಕಂಗೋಳಿಸಿದವು.

ಎಂಭತ್ತು ಸಾವಿರ ರೂಪಾಯಿನ ವಜ್ರವನ್ನು ಅಪಹರಿಸಿ, **ಮೋಹನ್ ಚಂದ್‌ನನ್ನು** ಕೊಲೆಮಾಡಿ ಓಡಿ ಹೋಗಿರುವ ಸುಂದರ ಯುವತಿಯನ್ನು ಹಿಡಿದು ಕೊಟ್ಟವರಿಗೆ ಐದು ಸಹಸ್ರ ರೂಪಾಯಿ ಬಹುಮಾನ.

ಜನತಾ ಎಕ್ಸ್‌ಪ್ರೆಸ್ಸಿನಲ್ಲಿ ನಡೆದ ಭಯಂಕರ ಕೊಲೆಯ, ಕೊಲೆಪಾತಕಿಯನ್ನು ಹಿಡಿದು ಕೊಟ್ಟವರಿಗೆ ಐದು ಸಹಸ್ರ ರೂಪಾಯಿ ಬಹುಮಾನ ಎಂಬ ವಿಷಯ ಪತ್ತೇದಾರ್ ಶಂಕರ್ ಮತ್ತು ಅವನ ಸಹಾಯಕ ಪತ್ತೇದಾರ ಅರುಗೇಂದ್ರನಿಗೆ ತಿಳಿದ ಒಡನೆಯೇ, ಕಾರ್ಯರಂಗಕ್ಕಿಳಿಯಲು ಸನ್ನಾಹ ನಡೆಸತೊಡಗಿದರು. ಅವರು ವಿವರಗಳನ್ನು ಯಾರಿಂದ ? ಹೇಗೆ ? ಯಾವರೀತಿ ? ತಿಳಿಯಬೇಕೆಂದು ಆಲೋಚಿಸುತ್ತಿದ್ದಾಗ ವಿಷಯಗಳು ಅವರ ಬಾಗಿಲಿಗೆ ಬಂದಿತು.

# ೨

ರಾತ್ರಿ ಹನ್ನೊಂದೂವರೆಗಂಟೆ ಹೊಡೆದು ಐದುನಿಮಿಷವಾಗಿತ್ತು. ಶಂಕರನ ಕೊಠಡಿಯಲ್ಲಿ ಶಂಕರ್, ಅರುಗೇಂದ್ರನೊಡನೆ, ಜೈ ಪ್ರಕಾಶ್ ವಜ್ರದ ದರೋಡೆ, ಮೋಹನ್‌ಚಂದ್‌ನ ಕೊಲೆ, ಈ ವಿಷಯಗಳನ್ನೇ ಮಾತನಾಡುತ್ತಿದ್ದ.

ಅವರಿಬ್ಬರ ತಲೆಯತುಂಬಾ ಇದೇ ವಿಷಯಗಳು ತುಂಬಿದ್ದವು.

" ಟಕ್ ಟಕ್ "

" ಅರುಗೇಂದ್ರ, ಯಾರೋ ಬಾಗಿಲು ತಟ್ಟುತ್ತಿದ್ದಾರೆ."

" ಪತ್ತೇದಾರರ ಆಫೀಸು ರಾತ್ರಿಯೊತ್ತು ತೆಗೆಯುತ್ತದೆ. ಬರುವ ಗಿರಾಕಿಗಳೆಲ್ಲಾ ರಾತ್ರಿಯ ಹೊತ್ತೇ."

" ಬಾಗಿಲು ತೆಗೆಯಯ್ಯಾ ಮುಂಜಿ "

ಅರುಗೇಂದ್ರ ನಿಧಾನವಾಗಿ ಎದ್ದುಹೋಗಿ ಬಾಗಿಲು ತೆಗೆದ. ತೆರೆದ ಬಾಗಿಲಿನಿಂದ ಸುಂದರ ಯುವತಿ ಪ್ರವೇಶಿಸಿದಳು

" ಶಂಕರ್ ಇದ್ದಾರೆಯೇ?"

" ನಾನೇ ಶಂಕರ್, ನನ್ನಿಂದೇನಾಗಬೇಕಾಗಿತ್ತು?"

" ಶಂಕರ್, ಕೊಲೆಪಾತಕಿ ನಾನಲ್ಲ ನಾನು ಏನೂ ಅರಿಯದ ಮುಗ್ಧೆ. ನೀವೇ ಕಾಪಾಡಬೇಕು. ನನ್ನ ನಿರಪರಾಧಿತ್ವವನ್ನು ಸಾಬೀತು ಮಾಡುವಂಥ ಸಾಕ್ಷ್ಯವ್ಯಾವುದು ನನ್ನ ಬಳಿಯಲ್ಲಿಲ್ಲ ಸತ್ಯಕ್ಕೆ ಜಯ ಲಭಿಸುವಂತೆ ಮಾಡಬೇಕು."

ಆ ಸುಂದರಿ ಮನಸ್ಸಿನಲ್ಲಿದ್ದದ್ದನ್ನೆಲ್ಲ ಬಡಬಡನೆ ಒದರಿಬಿಟ್ಟಳು.

" ಮೊದಲು ನೀವು ಕುಳಿತುಕೊಳ್ಳಿ."

"ಪೋಲೀಸರು ಬರಬಹುದು."

"ಇಲ್ಲಿ ನಿಮಗೆ ಪೋಲೀಸರ ಹೆದರಿಕೆ ಇಲ್ಲ."

"ನಾನು ನಿಮ್ಮ ಬಳಿಗೆ ಬಂದಿದ್ದೇನೆ. ನಿರಪರಾಧಿಗಳಿಗೆ ಸರಿಯಾದ ರಕ್ಷಣೆಯನ್ನು ಕೊಡುವಂಥ ವ್ಯಕ್ತಿ ನೀವೇ ಎಂದು ನಂಬಿ ನಿಮ್ಮಬಳಿ ಬಂದಿದ್ದೇನೆ. ನಾನು ಕಂಡ ತಿಳಿದ ಸಕಲ ವಿಷಯವನ್ನು ನಿಮಗೆ ಹೇಳುತ್ತೇನೆ. ನನ್ನಮೇಲೆ ಬಂದಿರುವಂಥ ಈ ಭಯಂಕರ ಅಪವಾದವನ್ನು ತಪ್ಪಿಸಿ."

ಸ್ವರ್ಗ ಸುಂದರಿಯಂತಿದ್ದ ಆ ಅಂದಗಾತಿಯ ಕಣ್ಣಿನಲ್ಲಿ ನೀರು ಹರಿಯಿತು.

ನೀವು ಭಯಪಡಬೇಡಿ. ನೀವು ನಿಜವಾಗಲು ನಿರಪರಾಧಿಯಾಗಿದ್ದಲ್ಲಿ ನಿಮಗೆ ಯಾವ ತೊಂದರೆಯೂ ಲಭಿಸುವದಿಲ್ಲವೆಂಬ ಭರವಸೆಯನ್ನು ಕೊಡುತ್ತೇನೆ. ನಾನು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡಿ.

"ಟಕ್....ಟಕ್"

ಯಾರೋ ಬಾಗಿಲು ತಟ್ಟಿದರು.

"ಅರುಣೇಂದ್ರ ಈ ಯುವತಿಯೊಡನೆ ನಮ್ಮ ರಹಸ್ಯ ಗೃಹಕ್ಕೆ ಹೋಗು" ಎಂದು ಹೇಳಿ ಅಲ್ಲಿಯೇ ಮೇಜಿನ ಕಾಲಿನ ಮೇಲಿದ್ದ ಒಂದು ವಿದ್ಯುತ್ ಗುಂಡಿಯನ್ನೊತ್ತಿದನು. ಪಕ್ಕದ ಗೋಡೆಯಲ್ಲಿ ಒಬ್ಬ ಮನುಷ್ಯ ನುಗ್ಗುವಂಥ ಒಂದು ಬಿರುಕು ಕಂಡುಬಂದಿತು. ಅರುಣೇಂದ್ರ ಆ ಯುವತಿಯೊಡನೆ ಆ ಬಿರುಕಿನೊಳಗಿಳಿದ. ಶಂಕರ್ ಮತ್ತೆ ಗುಂಡಿಯನ್ನೊತ್ತಿದ. ಸಕಲವು ಮೊದಲಿನಂತಾಯಿತು.

ನಿಧಾನವಾಗಿ ಅಗಳಿ ತೆಗೆದು ಬಾಗಿಲು ತೆಗೆದ. ತೆರೆದ ಬಾಗಿಲಿನಿಂದ ಇನ್ಸ್ಪೆಕ್ಟರ್ ಬಾಲನ್ ಪ್ರವೇಶಿಸಿದನು. ಬಾಲನ್‌ಗು ಶಂಕರ್‌ಗೂ ಬದ್ಧವೈರ. ಶಂಕರ್ ಕಕ್ಷಿದಾರರಿಂದ ಹಣ ಕಿತ್ತುಕೊಂಡು ನಿಜವಾದ ಕೊಲೆಗಾರರನ್ನು ಸುಳ್ಳುಸಾಕ್ಷ್ಯಗಳಿಂದ ನಿರಪರಾಧಿ ಎನ್ನಿಸಿ ಬಿಡುತ್ತಾನೆ ಎಂದು ಬಾಲನ್‌ರವರ ಭಾವನೆ. ಖಾಸಗಿ ಪತ್ತೇದಾರರು ಹಣದಾಸೆಗಾಗಿ ಏನನ್ನಾದರು ಮಾಡಿಬಿಡುತ್ತಾರೆ ಎಂಬುದು ಅವರ ವಾದ. ಬಾಲನ್‌ರವರ ಆಗಮನದಿಂದ ಶಂಕರ್‌ನ ರೀತಿಯಲ್ಲಿ ಯಾವ ಬದಲಾವಣೆಯು ಕಂಡು ಬರಲಿಲ್ಲ.

"ಬನ್ನಿ ಇನ್ಸ್ಪೆಕ್ಟರೇ, ಇಷ್ಟು ಹೊತ್ತಿನಲ್ಲಿ, ಇಷ್ಟು ದೂರ ಪಾದಬೆಳಸಿದ್ದು ?"

"ನನ್ನ ವಿಷಯವಿರಲಿ, ರಾತ್ರಿ ಒಂದು ಗಂಟೆಯಲ್ಲಿ ಇಲ್ಲಿ ದೀಪ ಉರಿಯು ತ್ತಿತ್ತಲ್ಲ........ಕಾರಣ ಕೇಳಬಹುದೋ?"

"ಇಂದಲ್ಲ........ಪ್ರತಿದಿನವೂ ರಾತ್ರಿ ಒಂದರವರೆಗೆ ಇಲ್ಲಿ ದೀಪ ಉರಿಯುತ್ತಲೇ ಇರುತ್ತದೆ. ನಾನು ಸಹ ಎದ್ದಿರುತ್ತೇನೆ. ಲೈಟ್ ಚಾರ್ಜಿನ ದುಡ್ಡು ನಾನೇ ಕಟ್ಟಿಕೊಳ್ಳುತ್ತೇನೆ."

"ಜನತಾ ಎಕ್ಸ್‌ಪ್ರೆಸ್ಸಿನಲ್ಲಿ ಮೋಹನ್‌ಚಂದ್‌ನ ಕೊಲೆ, ಮತ್ತು "ಜೈ ಪ್ರಕಾಶ್" ವಜ್ರದ ಅಪಹರಣ—ಕೊಲೆಪಾತಕಿಯ ಮಾಯ—ಈ ಸುದ್ದಿಗಳೆಲ್ಲಾ ನಿನಗೆ ತಿಳಿದಿರಬೇಕಲ್ಲ ಶಂಕರ್."

"ಕಿವುಡರಿಗೂ ಕೇಳಿಸುವಷ್ಟು ಜೋರಾಗಿ ಜಗತ್ತೇ ಆ ಸುದ್ದಿಯನ್ನು ಮಾತನಾಡುತ್ತಿರುವಾಗ ನನಗೆ ಕೇಳಿಸಿರುವುದರಲ್ಲಿ ಆಶ್ಚರ್ಯವೇನು ಬಂತು ಬಾಲನ್ ಸಾಹೇಬರೆ?"

"ಆ ಮಾಯವಾಗಿರುವ ಕೊಲೆಪಾತಕಿ ಬೆಂಗಳೂರಿನಲ್ಲಿಯೇ ಇದ್ದಾಳೆ."

"ಅವಳೇ ಕೊಲೆಪಾತಕಿ ಎಂದು ತೀರ್ಮಾನವಾಗಿಹೋಯಿತೋ?"

"ಅದು ಮುಂದಿನ ಪ್ರಶ್ನೆ—ಅವಳು ನಿರಾಪರಾಧಿಯಾಗಿದ್ದಲ್ಲಿ ಅವಳೇಕೆ ಪೋಲೀಸರ ಕಣ್ಣುಮರೆಯಲ್ಲಿ ಓಡಾಡಬೇಕು?"

"ನಾನು, ಅವಳು ಕೊಲೆಪಾತಕಿಯಲ್ಲ ಎಂದು ಹೇಳುತ್ತೇನೆ."

"ನೀನು ಹೇಳಿಬಿಟ್ಟರೆ ಅದು ಆಗಿಹೋಗುತ್ತದೆಯೋ?"

"ಆಕಸ್ಮಾತ್ ನಾನು ಈ ಮೊಕದ್ದಮೆಯನ್ನು ಪ್ರವೇಶಿಸಿದಲ್ಲಿ ಪೋಲೀಸರ ಊಹೆಗೆ ಸಿಕ್ಕದಿರುವಂಥ, ಅವರ ಕಣ್ಣಿನ ಮರೆಯಲ್ಲಿರುವ ಸತ್ಯವನ್ನು ಹೊರಗೆಡವುತ್ತೇನೆ."

"ಆಕಸ್ಮಾತ್ ಈ ಮೊಕದ್ದಮೆಗೆ ನೀನು ಪ್ರವೇಶಿಸುವುದೇನು ಬಂತು! ಈತ ಐದು ಸಾವಿರ ಬಹುಮಾನ ಅಂದಬಡನೆಯೇ ನೀನು ಈ ಕೇಸಿನ ಜಾದು ಹುಡುಕಲು ಸುರು ಮಾಡಿದ್ದೀಯಾ, ಖಾಸಗಿ ಪತ್ತೇದಾರರು ಹಣಕ್ಕೋಸ್ಕರ ಎಂಥ ನೀಚಕಾರ್ಯವನ್ನು ಮಾಡಲು ಹೇಸುವುದಿಲ್ಲ. ದೇವರಿಂದ ತಮಗೆ ದೊರಕಿರುವ ಅಪಾರ ಬುದ್ಧಿ, ಶಕ್ತಿ, ಸುಳ್ಳುಕೇಸನ್ನು ಗೆಲ್ಲಿಸುವುದಕ್ಕೆ ಉಪಯೋಗ ಮಾಡಿಕೊಳ್ಳುತ್ತಾರೆ."

" ಮಿ. ಬಾಲನ್, ಮರ್ಯಾದೆಯನ್ನು ಮೀರಿ ಮಾತನಾಡುತ್ತಿದ್ದೀರಿ. ಎಚ್ಚರಿಕೆ. ನನ್ನ ಮನೆಗೆ ಬಂದು ಆಧಾರವಿಲ್ಲದ ಅಪವಾದಗಳನ್ನು ಹೊರಿಸುವದರಿಂದ ಆಗುವ ಪರಿಣಾಮದಬಗ್ಗೆ ಎಚ್ಚರಿಕೆಯಿಂದಿರಿ. ನಾಳೆಯೇ ಡಿ ಎಸ್. ಪಿ.ಯವರನ್ನು ಕಂಡು ಮಾತನಾಡುತ್ತೇನೆ."

ಶಂಕರ್ ಡಿ. ಎಸ್. ಪಿ. ಎಂದೊಡನೆ ಬಾಲನ್ ತನ್ನ ಬಾಲವನ್ನು ಮುದುಡಿಕೊಂಡ ಶಂಕರ್‌ನ ಮೇಲಿನ ದ್ವೇಷಾಗ್ನಿ ಮಾತ್ರ ಅವನ ಹೃದಯದಲ್ಲಿ ಉರಿಯುತ್ತಲೇ ಇದ್ದಿತು.

" ಮತ್ತೊಂದು ಮುಖ್ಯ ವಿಷಯ ಶಂಕರ್."

"ಏನು ಸಾಹೇಬರೆ?"

" ಪೋಲೀಸರು ಹುಡುಕುತ್ತಿರುವ ಸುಂದರಿ, ನಿಮ್ಮ ಕಣ್ಣಿಗೆ ಬಿದ್ದರೆ ಅವಳನ್ನು ಕರೆದುಕೊಂಡುಬಂದು ಠಾಣೆಗೆ ಒಪ್ಪಿಸಿ ಬಹುಮಾನ ಐದು ಸಾವಿರವನ್ನು ಪಡೆಯಿರಿ. ಅವಳನ್ನು ಗೆಲ್ಲಿಸಲು ಪ್ರಯತ್ನ ಪಡಬೇಡಿ. ಈ ಭಾರಿ ಸೋಲು ನಿಮ್ಮದಾಗುತ್ತದೆ. ಕಾರಣ ನಾನು ನಿಮ್ಮ ಎದುರಾಳಿ, ನಾನು ಈ ಕೇಸನ್ನು ಮುಗಿಸುವ ಭರವಸೆಯನ್ನು ಸರಕಾರಕ್ಕೆ ಕೊಟ್ಟು ಅವರಿಂದ ಅಧಿಕೃತವಾದ ಅಪ್ಪಣೆಯನ್ನು ಪಡೆದಿರುತ್ತೇನೆ."

" ಈ ಕೇಸು ನಿಮ್ಮ ಕೈಗೆ ಕೊಟ್ಟಾಗಲೇ, ಅದು ನಿಮ್ಮಿಂದ ಅಸಾಧ್ಯ. ನಾನೇ ಪ್ರವೇಶಿಸಬೇಕೆಂದು ಐ.ಜಿ ಪಿ.ಯವರೇ ಖುದ್ದಾಗಿ ಫೋನಿನಲ್ಲಿ ತಿಳಿಸಿದ್ದಾರೆ."

ಈ ಮಾತಿನಿಂದ ಬಾಲನ್‌ಗೆ ತುಂಬಾ ಅವಮಾನವಾದಂತಾಯಿತು.

" ಈ ಮೊಕದ್ದಮೆಯನ್ನು ಪ್ರವೇಶಿಸಬೇಕಾದರೆ ಹಣವನ್ನು ನೀರಿನಂತೆ ಖರ್ಚು ಮಾಡಬೇಕಾಗುತ್ತದೆ ಶಂಕರ್."

" ಮೊನ್ನೆ ತಾನೇ ಮೋಹಿನಿಯ ಮೊಕದ್ದಮೆಯನ್ನು ಮುಗಿಸುವಾಗ ಐದಾರು ಸಾವಿರ ಅನಾಯಾಸವಾಗಿ ಸೇರಿದೆ. ಈ ಮೊಕದ್ದಮೆಯ ವೆಚ್ಚಕ್ಕಾಗುತ್ತದೆ. ನನ್ನನ್ನು ಹಂಗಿಸಿ ಅವಮಾನ ಮಾಡಿದ ನಿಮ್ಮನ್ನು ಈ ರೀತಿ ಪರಾಭವಗೊಳಿಸದೆ ಬಿಡುವುದಿಲ್ಲ ಈ ಕೇಸು ಅತ್ಯಂತ ಅಲ್ಲೋಲ–ಕಲ್ಲೋಲವಾಗಿದೆ ಮಿ. ಬಾಲನ್. ಈ ಕೇಸಿನ ಬಾಲವು ನಿಮಗೆ ಸಿಕ್ಕಿಲ್ಲ. ತಲೆ ಸಿಕ್ಕಿದಷ್ಟು

ಆನಂದದಿಂದ ಕುಣಿದಾಡುತ್ತಿದ್ದೀರಿ. ಸತ್ಯ ನಿಮ್ಮಿಂದ ಕಂಡು ಹಿಡಿಯಲಾಗುವುದಿಲ್ಲ. ನಾನು ಖಂಡಿತವಾಗಿ ಕಂಡುಹಿಡಿದು ತೋರಿಸುತ್ತೇನೆ. ಈ ಕೇಸು ನಮ್ಮಿಬ್ಬರ ಬುದ್ಧಿಶಕ್ತಿಯ ಪರೀಕ್ಷಾ ಪಂದ್ಯ–ನೆನಪಿರಲಿ ವಿ. ಬಾಲನ್. ಮಾಯವಾಗಿರುವ ಆ ಸುಂದರಿ ಕೊಲೆಪಾತಕಿಯಲ್ಲ."

"ಅವಳೆಲ್ಲಿ?"

"ಯಾರಿಗೆ ಗೊತ್ತು. ನೀವೂ ಹುಡುಕಿ."

"ಕೊಲೆಪಾತಕಿ ಅವಳಲ್ಲದಮೇಲೆ, ಅವಳೇಕೆ ತೆರೆಯ ಮರೆಯಲ್ಲಿರಬೇಕು. ಕಣ್ಣೆದುರಿಗೆ ಬರಲಿ."

"ಅವಳು ತನ್ನ ನಿರಾಪರಾಧಿತ್ವವನ್ನು ಸಾಬೀತು ಮಾಡುವಂಥ ಸಾಕ್ಷ್ಯಗಳನ್ನು ಸೃಷ್ಟಿಸಿಕೊಳ್ಳುತ್ತಿರಬಹುದೇನೋ?"

"ನಿಮ್ಮ ಈ ಮಾತುಗಳಿಂದ ನೀವೂ ಅವಳ ಮಾಯಕ್ಕೆ ಕಾರಣ ಎಂದು ತೋರುತ್ತದೆ."

"ನಿಮ್ಮ ಕಲ್ಪನಾಶಕ್ತಿಯ ನೆಳೆತಕ್ಕೆ ಸಿಗದ ವಿಷಯವೇ ಬಾಲನ್, ಈಗಲೇ ಹುಡುಕಿ. ಗುಮಾಸಿಯು ಮೇಲೆ ಮನೆಯನ್ನು ಶೋಧಿಸಿ."

"ಶಂಕರ್, ಮಾನವನ ಬುದ್ಧಿಶಕ್ತಿಗೂ ಮೀರಿದ ವಿಷಯಗಳಿರುತ್ತವೆ ಎಂಬುದು ನೆನಪಿರಲಿ"

"ನಿಮಗೂ ಅದು ನೆನಪಿರಲಿ"

"ಮಾಯವಾಗಿರುವ ಸುಂದರಿ ಕಂಡುಬಂದರೆ ಪೋಲೀಸರಿಗೆ ವಿಷಯವನ್ನು ತಿಳಿಸಿ ಐದು ಸಾವಿರ ರೂಪಾಯಿ ಬಹುಮಾನ ಪಡೆಯುವುದನ್ನು ಮರೆಯಬೇಡ ಶಂಕರ್."

"ಆ ಸುಂದರಿಯು ಸಿಕ್ಕರೆ ಕೊಲೆಪಾತಕಿ ಅವಳಲ್ಲ. ಕೆಲವು ಸಂದರ್ಭ ಸಾಕ್ಷ್ಯಗಳಿಂದ, ಅನಿರೀಕ್ಷಿತವಾದ ಘಟನೆಗಳಿಂದ ಅವಳಮೇಲೆ ಅಪವಾದ ಬಂದಿತ್ತು. ಎಂಬುದನ್ನು ತೋರಿಸಿಕೊಟ್ಟು ನಿರಾಪರಾಧಿಗಳಿಗೆ ರಕ್ಷಣೆಕೊಟ್ಟು ನಿಜವಾದ ಅಪರಾಧಿಯನ್ನು ಹಿಡಿದು ತೋರಿಸುತ್ತೇನೆ. ತಮಗೆ ಶಕ್ತಿ ಇದ್ದಲ್ಲಿ ಆ ಕೆಲಸವನ್ನು ತಾವು ಮಾಡಬಹುದು."

"ನೋಡೋಣ ಶಂಕರ್, ಮಾತಿನಷ್ಟು, ಕಾರ್ಯ ಸುಲಭವಾಗಿದ್ದಲ್ಲಿ ಜಗತ್ತಿನಲ್ಲಿ ಎಂತೆಂಥ ಕಾರ್ಯಗಳೋ ನಡೆದುಹೋಗುತ್ತಿತ್ತು."

"ಅದು ನಿಜ ಅನ್ನಿ."

"ಬರುತ್ತೇನೆ."

ಬಾಲನ್ ಸೂಕ್ಷ್ಮದೃಷ್ಟಿಯಿಂದ ಆ ಕೊಠಡಿಯನ್ನು ಅವಲೋಕಿಸಿ ಅಲ್ಲಿಂದ ನಿಧಾನವಾಗಿ ಹೊರಹೊರಟರು.

ಶಂಕರ್ ಬಾಗಿಲು ಹಾಕಿದ.

ಬಾಲನ್‌ಗೂ ಶಂಕರ್‌ಗೂ ಯಾವಾಗಲೂ ಘರ್ಷಣೆಯಾಗುತ್ತಿತ್ತು. ಪ್ರತಿಯೊಂದು ತೊಡಕು ಮೊಕದ್ದಮೆಯನ್ನು ಶಂಕರ್ ಪ್ರವೇಶಿಸುತ್ತಿದ್ದ. ಸಮಾಧಾನಪೂರಿತ, ಸಮಾಲೋಚನೆ, ಧೈರ್ಯ, ತಿಳುವಳಿಕೆಯ ಹೆಜ್ಜೆ, ಅತ್ಯಂತ ಅಮೂಲ್ಯ ಕಲ್ಪನಾಶಕ್ತಿಯಿಂದ ಶಂಕರ್ ಹಿಡಿದ ಕೇಸುಗಳಲ್ಲಿ ಜಯಹೊಂದುತ್ತಿದ್ದ. ಅವನ ಧ್ಯೇಯ ನ್ಯಾಯದೃಷ್ಟಿಯಾಗಿರುತ್ತಿತ್ತು. ಅವನ ಬಳಿಗೆ ಬರುತ್ತಿದ್ದ ವ್ಯಕ್ತಿಗಳಲ್ಲಿ ಅಪರಾಧಿಗಳು, ನಿರಪರಾಧಿಗಳು ಇಬ್ಬರೂ ಇರುತ್ತಿದ್ದರು. ಕಕ್ಷಿದಾರ ಎಂಬ ಭಾವನೆ ಅವನ ಮನಸ್ಸಿನಲ್ಲಿಯೇ ಇರುತ್ತಿರಲಿಲ್ಲ. ಅವನ ದೃಷ್ಟಿ ಅಪರಾಧಿಗೆ ಶಿಕ್ಷೆ. ನಿರಪರಾಧಿಗೆ ರಕ್ಷೆ. ಅನೇಕ ಪೋಲೀಸು ಇಲಾಖೆಯ ಅಧಿಕಾರಿಗಳು ಅವನಿಗೆ ಆಪ್ತಗೆಳೆಯರಾಗಿದ್ದರು. ಸರಕಾರದ ಪರವಾಗಿ ಅವನು ಕೆಲಸ ಮಾಡಿದ್ದ. ಸರಕಾರ ಅವನಿಗೆ ಉತ್ತಮ ಉದ್ಯೋಗವನ್ನು ಕೊಡಲು ತನ್ನ ಸಿದ್ಧ ಹಸ್ತವನ್ನು ಅನೇಕಬಾರಿ ನೀಡಿತ್ತು. ವಕೀಲ ವೃತ್ತಿಯಲ್ಲಿದ್ದ ಅವನಿಗೆ ಸ್ವಾತಂತ್ರ್ಯ ಜೀವನ ಚೆನ್ನಾಗಿ ಅಭ್ಯಾಸವಾಗಿತ್ತು. ಈಗ ಬೇರೆಯವರ ಕೈಕೆಳಗೆ ಕೆಲಸ ಮಾಡಲು ಅವನ ಮನಸ್ಸು ಒಡಂಬಡುತ್ತಿರಲಿಲ್ಲ. ಅವನು ಸರಕಾರದ ವಿರುದ್ಧವಾಗಿ ಯಾವ ಕಾರ್ಯವನ್ನು ಮಾಡಿರಲಿಲ್ಲ. ಸತ್ಯವನ್ನು ಹೊರತರಲು ಸಹಾಯಕವಾಗಲೆಂದು ಅನೇಕಬಾರಿ ಪೋಲೀಸರಿಗೆ ಸುಳ್ಳು ಹೇಳಿದ್ದ. ಅವನ ದೃಷ್ಟಿ ಸರಕಾರಕ್ಕೆ ಮೋಸಮಾಡಲೆಂದಲ್ಲ. ಸತ್ಯವನ್ನು ಹೊರತರುವ ಶುಭ್ರದೃಷ್ಟಿ. ಪೋಲೀಸ್ ಇನ್ಸ್‌ಪೆಕ್ಟರುಗಳೊಡನೆ ಕಲೆತು ಕೆಲಸಮಾಡಿದ್ದ. ಆದರೆ ಬಾಲನ್ ಮಾತ್ರ ಶಂಕರ್‌ನನ್ನು ದ್ವೇಷಿಸುತ್ತಿದ್ದ. ಖಾಸಗಿ ಪತ್ತೇದಾರರು ಎಂದರೆ ಬಾಲನ್ ಉದಾಸೀನವಾಗಿ ಮಾತಾಡುತ್ತಿದ್ದ. ಅದರಲ್ಲೂ ಶಂಕರ್ ಎಂದರೆ ಅವನಿಗೆ ಇನ್ನೂ ಹೆಚ್ಚು ದ್ವೇಷ. ಆದರೆ ಪ್ರತಿ ಮೊಕದ್ದಮೆ

ಯಲ್ಲೂ ಶಂಕರ್‌ನಿಕೆ ವಿಜಯಲಕ್ಷ್ಮಿ ತನ್ನ ಮಾಲೆಯನ್ನು ಹಾಕುತ್ತಿದ್ದಳು. ಮೊನ್ನೆ ಮೊನ್ನೆ ಸುಪ್ರಸಿದ್ಧ ಸಿನಿಮಾ ನಟಿ ಅಪ್ಸರೆಯ ಕೊಲೆಮೊಕದ್ದಮೆಯನ್ನು ಮುಗಿಸಿದ್ದಕ್ಕೆ ಅವನಿಗೆ ಅನೇಕ ಬಹುಮಾನಗಳು, ಹಣ-ಕೀರ್ತಿಗಳು ಯಥೇಚ್ಛವಾಗಿ ಲಭಿಸಿದ್ದವು.

ಶಂಕರ್ ಕಾಲಿಂಗ್‌ಬೆಲ್ ಒತ್ತಿದ. ಒಡನೆಯೇ ಗುಪ್ತದ್ವಾರದಿಂದ ಮಾರುತ್ತರ ಬಂದಿತು.

ಅರುಗೇಂದ್ರ ಆ ಸುಂದರಿಯೊಡನೆ ಮೇಲಕ್ಕೆ ಬಂದ.

" ನೀವು ಕೊಲೆಪಾತಕಿ ಅಲ್ಲ ಅನ್ನುವದನ್ನು ಸಾಬೀತು ಮಾಡುವವರೆಗೂ ನೀವು ಈ ರಹಸ್ಯಮಂದಿರದಲ್ಲಿಯೇ ವಾಸಿಸಬೇಕು. ನಾನು ಯಾವ ರೀತಿ ಹೇಳಿದರೆ ಆ ರೀತಿ ನಡೆದುಕೊಳ್ಳಬೇಕು."

ಆ ಸುಂದರಿ ಶಂಕರ್‌ನ ಮಾತಿಗೆ ತಲೆತೂಗಿದಳು.

" ನಿನ್ನ ಹೆಸರೇನು ? "

" ಲೀಲಾ."

" ವಾಸಸ್ಥಳ?"

" ಬೆಂಗಳೂರು."

" ನಿನಗೆ ತಂದೆ-ತಾಯಿಗಳು ಯಾರಾದರೂ ಇದ್ದಾರೆಯೇ ? "

" ಇದ್ದಾರೆ."

" ಅವರೆಲ್ಲಿದ್ದಾರೆ ?"

" ಅವರಿಬ್ಬರೂ ಕುರುಡರು—ಅವರಿಗೆ ನಾನೊಬ್ಬಳೇ ಮಗಳು. ಅವರು ಬೆಂಗಳೂರಿನಲ್ಲಿದ್ದಾರೆ."

" ನಿನ್ನ ಕಸಬು?"

" ಚಿತ್ರನಟಿ."

" ಬೊಂಬಾಯಿಗೆ ಹೋದ ಕಾರಣ ?"

" ಯಾವದೋ ಒಂದು ಚಿತ್ರ ನಿರ್ಮಾಪಕರಿಂದ ಕರೆಬಂದಿತ್ತು. ಅದರ ಮೇಲೆ ಬೊಂಬಾಯಿಗೆ ಹೋದೆ. ಬರುತ್ತಿರುವಾಗಲೇ ಈ ಅನಾಹುತ ನಡೆದಿದ್ದು."

" ನಿಮ್ಮ ವಿಚಾರ ನಮಗೆ ಕೊಂಚ ತಿಳಿದಂತಾಯಿತು. ಲೀಲಾದೇವಿಯವರೆ, ಇನ್ನು ಜನತಾ ಎಕ್ಸಪ್ರೆಸ್ಸಿನಲ್ಲಿ ಏನು ನಡೆಯಿತು, ಎಂಬುದನ್ನು ಆದಷ್ಟು ವಿಶದವಾಗಿ ಹೇಳಿ. ಪ್ರತಿಯೊಂದು ವಿಷಯವನ್ನು ಸರಿಯಾಗಿ ಜ್ಞಾಪಿಸಿಕೊಂಡು ಹೇಳಿ."

" ಆ ರಾತ್ರಿ ನಾನು ಆ ಕ್ಯಾರೇಜಿನಲ್ಲಿ ಕುಳಿತಿದ್ದೆ. ನಮ್ಮ ಕ್ಯಾರೇಜಿನಲ್ಲಿ ಮೂವರು ಪ್ರಯಾಣಿಕರಿದ್ದೆವು. ನಾನು, ಕೊಲೆಯಾದ ಮೋಹನ್‌ಚಂದ್ ಮತ್ತು ಒಬ್ಬ ಹಣ್ಣುಹಣ್ಣು ಮುದುಕ-ಮೂವರೇ ಕ್ಯಾರೇಜಿನಲ್ಲಿದ್ದುದು.

ರಾತ್ರಿ ಒಂದುವರೆ ಗಂಟೆಯ ಹೊತ್ತಿನಲ್ಲಿ ನಾನು ಬಾತ್ ರೂಮಿಗೆ ಹೋಗಲು ಬಾಗಿಲು ತೆಗೆದೆ. ಒಳಗಡೆ ಇಬ್ಬರು ವ್ಯಕ್ತಿಗಳು ನಿಂತಿದ್ದರು. ಅವರ ಕೈಯಲ್ಲಿ ರಿವಾಲ್ವರ್ ಇದ್ದಿತು. ಮಾತಾಡಿದರೆ ಸುಟ್ಟುಬಿಡುತ್ತೇನೆ ಎಂದು ಹೇಳಿದರು.

ನಾನು ಅಲ್ಲಿಯೇ ಸುಮ್ಮನೆ ನಿಂತಕೊಂಡೆ.

ಅವರಲ್ಲಿ ಒಬ್ಬ ಮೋಹನ್‌ಚಂದ್‌ರ ಮೂಗಿಗೆ ಕರ್ಚೀಫನ್ನು ಮೂಸಿಸಿದ. ಅವರ ಸೊಂಟದಲ್ಲಿದ್ದ ಒಂದು ಡಬ್ಬಿಯನ್ನು ತೆಗೆದುಕೊಂಡು ಮತ್ತೊಬ್ಬನ ಕೈಯಲ್ಲಿದ್ದ ರಿವಾಲ್ವರ್‌ನಿಂದ ಎರಡು ಗುಂಡುಗಳು ಹಾರಿದವು. ಸೈಲೆನ್ಸರ್ ಅಟ್ಯಾಚ್ ಮಾಡಿದ್ದರಿಂದ ಹೆಚ್ಚು ಶಬ್ಧ ಕೇಳಿಬರಲಿಲ್ಲ.

ನನ್ನ ಕೈಲಿದ್ದ ವ್ಯಾನಿಟಿ ಬ್ಯಾಗನ್ನು ಕಿತ್ತುಕೊಂಡು ಮೋಹನ್‌ಚಂದ್‌ರ ಶವದಮೇಲೆ ಹಾಕಿದರು.

ಅರವತ್ತು ವರ್ಷದ ಮುದುಕನೊಬ್ಬ ಕುಳಿತಿದ್ದ ಎಂದು ಹೇಳಿದೆನಲ್ಲ ಅವನು ವೇಷಧಾರಿ. ಮುಖಕ್ಕೆ ಹಾಕಿಕೊಂಡಿದ್ದ ದಾಡಿಯನ್ನು ಕಿತ್ತುಹಾಕಿದ. ಅವನು ಚೋರರ ಗುಂಪಿಗೆ ಸೇರಿದವನೆ.

ನಾವು ಸರಪಳಿಯನ್ನು ಎಳೆದು ರೈಲು ನಿಲ್ಲಿಸುತ್ತೇವೆ. ನೀನು ಓಡಿಹೋಗಿ ರೈಲಿನ ಪಕ್ಕದಲ್ಲೇ ಬರುತ್ತಿರುವ ಕಾರಿನಲ್ಲಿ ಹತ್ತಬೇಕು, ಇಲ್ಲದಿದ್ದರೆ ನಿನ್ನನ್ನು ಸುಟ್ಟುಬಿಡುತ್ತೇವೆ ಎಂದು ಹೇಳಿದರು. ಅವರ ಮಾತಿನಂತೆ ಚೈನು ಎಳೆದು ರೈಲು ನಿಲ್ಲಿಸಿದರು. ನಾನು ಓಡಿಹೋಗಿ ಕಾರಿನಲ್ಲಿ ಕುಳಿತುಕೊಂಡೆ. ಅದನ್ನು ಗಾರ್ಡ್ ಮುಂತಾದವುರು ನೋಡಿದರು. ಶವದಮೇಲೆ ಬಿದ್ದಿದ್ದ ನನ್ನ

ವ್ಯಾನಿಟಿಬ್ಯಾಗ್ ಇದರಿಂದ ನಾನೇ ಕೊಲೆಪಾತಕಿ ಎಂದು ಹೇಳುತ್ತಾರೆ. ನಾನು ನಿರಾಪರಾಧಿ."

" ನೀವು ಕಾರಿನಲ್ಲಿ ಕುಳಿತುಕ್ಕೊಂಡಮೇಲೇನಾಯಿತು ?"

" ಅವರು ನನ್ನನ್ನು ಕೊಂದುಬಿಡಬೇಕೆಂದಿದ್ದರೋ ಏನೊ."

" ನೀನು ಅವರಿಂದ ಯಾವರೀತಿ ತಪ್ಪಿಸಿಕ್ಕೊಂಡೆ?"

" ಆ ಕಾರು ಬೆಂಗಳೂರಿಗೆ ಬಂದಿತು."

" ಆಮೇಲೆ?"

" ಒಂದು ಟ್ಯಾಕ್ಸಿ ಗೊತ್ತುಮಾಡಿ ನನ್ನನ್ನು ಒಬ್ಬನ ಜೊತೆಯಲ್ಲಿ ಆ ಟ್ಯಾಕ್ಸಿಯಲ್ಲಿ ಕೂಡಿಸಿ ವಿಲ್ಸನ್ ಗಾರ್ಡನ್ನಿನ ಕಡೆ ಕಳುಹಿಸಿದರು. ಮತ್ತೆ ಆ ಕಾರು ಹೊರಟುಹೋಯಿತು."

"ನಾನು ಟ್ಯಾಕ್ಸಿ ಡ್ರೈವರ್‌ಗೆ ಸಿಗ್ನಲ್ ಮಾಡಿದೆ. ಆವನು ಏನು ಅರ್ಥ ಮಾಡಿಕ್ಕೊಂಡನೋ ಏನೋ ಟ್ಯಾಕ್ಸಿ ನಿಲ್ಲಿಸಿದ. ನಾನು ಅವನಿಗೆ ಹೇಳಿದೆ. ಇವರು ನನ್ನನ್ನು ಬೊಂಬಾಯಿನಿಂದ ಬಲಾತ್ಕಾರವಾಗಿ ಎಳೆದುಕ್ಕೊಂಡು ಬಂದಿದ್ದಾರೆ ಎಂದು ಹೇಳಿದೆ.

"ಡ್ರೈವರ್ ಟ್ಯಾಕ್ಸಿಯಲ್ಲಿ ಕುಳಿತಿದ್ದವನಿಗೆ ಹೊರಗಡೆ ಎಳೆದುಕೊಂಡ್ರ

"ಅವನು ಡ್ರೈವರ್‌ಗೆ ದುಡ್ಡು ಕೊಡಲುಹೋದ. ನಾನು ಐವತು ರೂಪಾಯಿ ತೆಗೆದುಕ್ಕೊಂಡು ಡ್ರೈವರಿಗೆಕೊಟ್ಟೆ.

"ಆ ಡಾಕುವಿಗೂ, ಡ್ರೈವರಿಗೂ ಮಾರಾಮಾರಿಯಾಯಿತು. ಮುಖ ಮೂತಿ ನೋಡದೆ, ಡ್ರೈವರ್ ಅವನಿಗೆ ಹೊಡೆದ.

"ಈ ಭಯಂಕರ ಒಡಿದಾಟವನ್ನು ನೋಡಲು ಜನ ಸೇರಿದರು. ನಾನು ಅಲ್ಲಿಂದ ಮೆಲ್ಲಗೆ ನುಸುಳಿಕ್ಕೊಂಡು ನಮ್ಮ ಮನೆಗೆ ಹೋದೆ.

"ಪೋಲೀಸರು ಶೀಘ್ರದಲ್ಲಿಯೇ ನನ್ನ ಮನೆಯನ್ನು ಜಪ್ತಿಮಾಡುತ್ತಾರೆ ಎಂಬ ಭಯವಿತ್ತು. ಗೋಡೆಗೋಡೆಗಳಮೇಲೂ ನನ್ನ ಫೋಟೋಗಳು ಕಂಡುಬಂದವು. ಹಾಗೂಹೀಗೂ ಈವರೆಗೂ ಪೋಲೀಸರ, ಜನರ ಕಣ್ಣಿನಿಂದ ತಪ್ಪಿಸಿಕ್ಕೊಂಡು ಬಂದು ನಿಮ್ಮನ್ನುಸೇರಿ ನಿಮಗೆ ವಿಷಯ ತಿಳಿಸಿದಂತಾಯಿತು. ಇನ್ನು ಮುಂದಿನ ಹೆಜ್ಜೆ ನಿಮ್ಮದು. ನೀವು ಯಾವರೀತಿ ಹೇಳಿದರೆ ಆ ರೀತಿ

ನಡೆದುಕೊಳ್ಳಲು ಸಿದ್ಧನಾಗಿದ್ದೇನೆ. ಹೇಗಾದರೂಮಾಡಿ ನೀವು ನನ್ನ ನಿರಪರಾಧಿತ್ವವನ್ನು ಸಾಬೀತು ಮಾಡಬೇಕು."

" ಲೀಲಾದೇವಿಯವರೇ, ನೀವು ಹೆದರಬೇಡಿ. ನಿರಪರಾಧಿಗಳಿಗೆ ಯಾವ ತೊಂದರೆಯೂ ಆಗುವುದಿಲ್ಲ. ನಿಜವಾದ ಅಪರಾಧಿ ಸಿಗುವವರೆಗೂ ನೀವು ನನ್ನ ಬಳಿಯಲ್ಲಿಯೇ ಇರಿ. ನಿಮ್ಮ ತಂದೆ-ತಾಯಿಗಳ ರಕ್ಷಣೆಗೆ ಮನೆಯಲ್ಲಿ ಆಳುಗಳಿದ್ದಾರೆ ತಾನೇ ?"

" ಇದ್ದಾರೆ. ಅದಕ್ಕೆಲ್ಲ ತಕ್ಕ ಬಂದೋಬಸ್ತು ಮಾಡಿದ್ದೇನೆ."

" ನೀವು ನನ್ನ ಗುಪ್ತ ಮಂದಿರದಲ್ಲಿರಿ, ಮೋಹನ್‌ಚಂದ್‌ನನ್ನು ಕೊಂದ ಕೊಲೆಪಾತಕರು, ನಿಮ್ಮನ್ನು ಕೊಲೆಮಾಡುವ ಯೋಜನೆಯನ್ನು ಹಾಕಿರುತ್ತಾರೆ."

" ಹೇಗಾದರೂಮಾಡಿ ನೀವೇ ನನ್ನನ್ನು ಕಾಪಾಡಬೇಕು. ತಾವು ಹೇಳಿದಂತೆ ನಾನು ಕೇಳುತ್ತೇನೆ."

"ನೀವು ಇನ್ನು ಈ ಗಪ್ತಮಂದಿರದಲ್ಲೀಬಹುದು. ಅಲ್ಲಿ ನಿಮಗೆ ಎಲ್ಲಾ ಸೌಲಭ್ಯಗಳನ್ನು ಒದಗಿಸುತ್ತೇನೆ.'

ಲೀಲಾವತಿ, ಅರುಗೇಂದ್ರನೊಡನೆ ಗುಪ್ತಮಂದಿರವನ್ನು ಪ್ರವೇನಸಿದಳು.

ಶಂಕರ್ ಈ ಮೊಕದ್ದಮೆಯನ್ನು ಯಾವ ರೀತಿಯಲ್ಲಿ ಮುಂದುವರಿಸಬೇಕು ಎಂದು ಯೋಚಿಸತೊಡಗಿದ. ಆ ಅಮೂಲ್ಯ ವಜ್ರಗಳಿಗೋಸ್ಕರ ಕೊಲೆಯಾಗಿದೆ ಎಂಬದು ಸ್ಪಷ್ಟವಾಗಿತ್ತು. ವಜ್ರವನ್ನು ಅಪಹರಿಸಿದ್ದಾರೆ. ಮೋಹನ್‌ಚಂದ್ ಶ್ರೀನಗರದಲ್ಲಿ ವಜ್ರವನ್ನು ಕೊಂಡದ್ದು ಈ ದರೋಡೆಗಾರರಿಗೆ ತಿಳಿಯಿತು ಅಲ್ಲಿಂದ ಆವರು ಮೋಹನ್‌ಚಂದ್‌ನ ಬೆನ್ನುಹತ್ತಿದ್ದಾರೆ. ಸಮಯ ನೋಡಿ ಮೋಹನ್‌ಚಂದ್‌ನ ಕೊಲೆಮಾಡಿ ವಜ್ರವನ್ನು ಅಪಹರಿಸಲು ನಿರ್ಧರಿಸಿದ್ದಾರೆ. ಮೋಹನ್‌ಚಂದ್‌ನ ಕೊಲೆಯಾಗಿರುವುದರಿಂದ ಅವನ ಕೊಲೆ ಏತಕ್ಕಾಯಿತು ಎಂಬುದು ಪೋಲೀಸರಿಗೆ ತಿಳಿದಿಲ್ಲ. ಪೋಲೀಸರಿಗೆ ವಜ್ರದ ವಿಷಯವೇ ತಿಳಿದಿಲ್ಲ. ಇನ್ನುಮುಂದೆ ಮೋಹನ್‌ಚಂದ್‌ನಬಗ್ಗೆ ಹೆಚ್ಚಿನ ವಿವರಣೆಯನ್ನು ಹುಡುಕಿದಾಗ ಅವರಿಗೆ ತಿಳಿಯಬಹುದು. ಈ ದರೋಡೆಗಾರರು ವಜ್ರವನ್ನು ಯಾವ ರೀತಿ ಯಾವ ಸಂಸ್ಥಾನದಲ್ಲಿ ಮಾರಾಟ ಮಾಡುತ್ತಾರೆ ಎಂಬುದನ್ನು ಗಮನಿಸಬೇಕು. ಶಂಕರ್‌ನ ತಲೆಯ ತುಂಬ ಈ ವಿಚಾರಗಳೇ ತುಂಬಿದ್ದವು.

"ಹಲೋ ಶಂಕರ್."

"ಹಲೋ ಯಾರು ಮಾತನಾಡುತ್ತಾ ಇರುವುದು."

"ನೀನು ನಿನ್ನ ಮನೆಯಲ್ಲಿ ಕೊಲೆಪಾತಕಿಗೆ ಆಶ್ರಯಕೊಟ್ಟಿದ್ದೀಯೋ ಶಂಕರ್, ಕಾನೂನಿನ ದೃಷ್ಟಿಯಿಂದ ಅದು ಸರಿಯಲ್ಲ. ಆದರೆ ಅವಳು ಕೊಲೆ ಪಾತಕಿಯಲ್ಲ ಎಂಬ ವಿಷಯ ಅವಳು ನಿನಗೆ ಹೇಳಿರಬಹುದು. ಅವಳನ್ನು ಖಂಡಿತ ನಾನು ಕೊಲ್ಲುತ್ತೇನೆ ನನ್ನಂಥ ದಗಾಬಾಜಿಗೆ ದಗಾಹಾಕಿ ನಿನ್ನ ಬಳಿಗೆ ಬಂದಿದ್ದಾಳೆ ನೀನು ಅವಳನ್ನು ಭೂಗರ್ಭದಲ್ಲಿ ಬಚ್ಚಿಟ್ಟರು ನಾನು ಬಿಡುವುದಿಲ್ಲ. ಹೇಗಾದರು ಅವಳ ತಲೆಯನ್ನು ಹಾರಿಸಿಯೋ ಹಾರಿಸುತ್ತೇನೆ. ನಾನೇ ಮೋಹನಾ ಚಂದ್‌ನನ್ನು ಕೊಂದು ಆ ವಜ್ರವನ್ನು ಅಪಹರಿಸಿದವನು ಆದರೆ ನಾನು ಯಾರು ? ಅದನ್ನು ಖಂಡಿತ ಹಿಡಿಯುವುದು ಅತ್ಯಂತ ಕಠಿಣ ಕಾರ್ಯವೇ ಸರಿ. ನಾನು ಬೆಟ್ಟದಲ್ಲಿ ಗುಹೆಮಾಡಿಕೊಂಡು ವಾಸಮಾಡು ತ್ತಿಲ್ಲ. ನಿನ್ನ ಕಣ್ಣೆದುರಿಗೇನೇ, ನೀನು ವಾಸಮಾಡುತ್ತಿರುವ ಊರಿನಲ್ಲಿಯೋ ನೀನು ಓಡಾಡುತ್ತಿರುವ ಸಮಾಜದಲ್ಲಿಯೋ ಇದ್ದೇನೆ. ಆದರೆ ನೀನು ನನ್ನನ್ನು ಕಂಡುಹಿಡಿಯಲಾರೆ. ಒಡವಾಯಿ ಪೋಲೀಸಿನವರ ಕೈಲೇನಾಗುತ್ತದೆ. ನಿನ್ನಂಥ ಪತ್ತೇದಾರರಿಗ ಚಳ್ಳೇಹಣ್ಣು ತಿನ್ನಿಸುವ ನಾನು ಅವರ ಕೈಗೆ ಸಿಕ್ಕಿ ಹಾಕಿಕೊಳ್ಳುತ್ತೇನೆಯೇ ! ಆ ನಿರಪರಾಧಿ ಯುವತಿಯೇ ಕೊಲೆಪಾತಕಿ ಎಂದು ಹೇಳಿ ಬೀದಿಬೀದಿಯಲ್ಲಿ ಅವಳ ಫೋಟೋ ನೇತುಹಾಕಿ, ಹಿಡಿದು ಕೊಟ್ಟವರಿಗೆ ಐದುಸಾವಿರ ರೂಪಾಯಿ ಬಹುಮಾನ ಎಂದು ಸಾರುತ್ತಿದ್ದಾರೆ. ನಾನು ಯಾವ ನಂಬರಿನಿಂದ ಮಾತನಾಡುತ್ತಿದ್ದೇನೆ ಎಂಬುದನ್ನು ಕಂಡುಹಿಡಿ ಯುವ ಶ್ರಮವೇಕೆ ? ನಾನು ಮಾತನಾಡುತ್ತಿರುವುದು ಪೋಲಿಸ್ ಸ್ಟೇಷನ್ ಫೋನಿನಿಂದ. ನನ್ನನ್ನು ಕಂಡುಹಿಡಿಯುವ ಪ್ರಯತ್ನದಲ್ಲಿ ಇಲ್ಲದ ತೊಂದರೆ ಬರಬಹುದು. ಎಚ್ಚರಿಕೆ. ನಮಸ್ಕಾರ ಪತ್ತೇದಾರರಿಗೆ. ಮತ್ತೊಮ್ಮೆ ಭೇಟಿ ಯಾಗುತ್ತೇನೆ."

ಶಂಕರ್ ರಿಸೀವರನ್ನು ಟೇಬಲ್ಲಿನ ಮೇಲಿಟ್ಟ.

ದರೋಡೆಗಾರರು ತುಂಬಾ ಬುದ್ಧಿವಂತರು. ಅತ್ಯಂತ ಚತುರತೆಯಿಂದ ವಜ್ರವನ್ನು ಅಪಹರಿಸಿದ್ದಾರೆ. ಆ ವಜ್ರಕ್ಕೆ ಈ ದರೋಡೆಗಾರರಿಂದ ಇನ್ನೂ ಎಷ್ಟು ನರಬಲಿಯಾಗಲಿದೆಯೋ ! ಏನೋ !

"ಬಾ ಅರುಗೇಂದ್ರ "

ಅರುಗೇಂದ್ರ ಅಲ್ಲಿಯೇ ಇದ್ದ ಕುರ್ಚಿಯ ಮೇಲೆ ಕುಳಿತುಕ್ಕೊಂಡ.

"ಏನು ವಿಷಯ."

"ವಜ್ರಗ ದರೋಡೆಗಾರ ಮತ್ತು ಕೊಲೆಪಾತಕ ಅತ್ಯಂತ ಚತುರ. ಪೋಲೀಸ್ ಸ್ಟೇಷನ್ನಿಂದಲೇ ನನಗೆ ಫೋನು ಮಾಡಿದ."

"ಏನು ಪೋಲಿಸ್ ಸ್ಟೇಷನ್ನಿಂದಲೇ... "

"ಹೌದು "

"ಪೋಲಿಸ್ ಠಾಣೆಯಿಂದ ಪತ್ತೇದಾರನ ಮನೆಗೆ ಫೋನು ಮಾಡಬೇಕಾದರೆ ಆ ದಗಾಕೋರ ಎಂಥ ಚತುರನಿರಬೇಕು."

"ಅವನು ಶ್ರೀನಗರದಲ್ಲಿ ಮೋಹನ್‌ಚಂದ್ ವಜ್ರ ತೆಗೆದುಕೊಂಡಾಗಿಲಿಂದ ಅವರ ಮೇಲೆ ಒಂದು ಕಣ್ಣಿಟ್ಟುಕ್ಕೊಂಡೇ ಬಂದಿದ್ದಾರೆ. ಒಬ್ಬ ಢಾಕು ಮುದುಕನ ವೇಷಧಾರಿ ಸಿಕ್ಕೊಂಡು ಮೋಹನ್‌ಚಂದ್ ಕುಳಿತಿದ್ದ ಕ್ಯಾರೇಜಿನಲ್ಲಿಯೇ ಕುಳಿತಿದ್ದಾನೆ. ಮತ್ತಿಬ್ಬರು ಢಾಕುಗಳು ಕಕ್ಕಸ್ಸಿನಲ್ಲಿ ಬಚ್ಚಿಟ್ಟುಕ್ಕೊಂಡಿದ್ದಾರೆ ಲೀಲಾದೇವಿಯ ವ್ಯಾನಿಟಿ ಬ್ಯಾಗನ್ನು ಶವದ ಮೇಲೆ ಹಾಕಿ ಈ ಹತ್ಯೆಯನ್ನು ನಿರಪರಾಧಿಯಾದ ಲೀಲಾಳ ಮೇಲೆ ಹೊರಿಸಿದ್ದಾರೆ. ಪೋಲಿಸರು ವಿವೇಚನೆಯಿಲ್ಲದೆ ಆ ನಿರಪರಾಧಿನಿಯನ್ನೇ ಕೊಲೆಪಾತಕಿ ಎಂದು ತೀರ್ಮಾನಮಾಡಿದ್ದಾರೆ "

"ಪತ್ತೇದಾರರಿಬ್ಬರು ಕೈಮೇಲಕ್ಕೆತ್ತಿ ಇಲ್ಲದಿದ್ದರೆ ಗುಂಡು ಹಾರಿಸಿ ಇಬ್ಬರನ್ನೂ ಪರಲೋಕಕ್ಕೆ ಕಳುಹಿಸುತ್ತೇನೆ."

ಶಂಕರ್ ಮತ್ತು ಅರುಗೇಂದ್ರ ಇಬ್ಬರೂ ತಲೆ ಎತ್ತಿ ನೋಡಿದರು. ಆರು ಅಡಿ ಎತ್ತರಮುಖವಾಡದ ಭೂತಾಕಾರದ ಭಯಂಕರ ಮೂರ್ತಿ ರಿವಾಲ್ವರ್ ಧಾರಿಯಾಗಿ ಎದುರಿಗೆ ನಿಂತಿದೆ.

ಆ ವ್ಯಕ್ತಿಯ ಹಣೆ ಇವಿನಿಂಗ್ ಹ್ಯಾಟಿನಿಂದ ಮುಚ್ಚಲ್ಪಟ್ಟಿದೆ. ಬಾಯಿಗೆ ಕೆಂಪು ಕರವಸ್ತ್ರವನ್ನು ಕಟ್ಟಿಕ್ಕೊಂಡಿದ್ದಾನೆ. ಕರಿಯ ಉಲ್ಲನ್ ಸೂಟು ಹಾಕಿಕ್ಕೊಂಡಿದ್ದಾನೆ. ಕರಿಯ ಬೂಟ ಷೂಸ್ ಹಾಕಿಕೊಂಡಿದ್ದ.

ಕಣ್ಣುಗಳಿಗೆ ಪೈಲಟ್ ಟೈಪ್ (ವಿಮಾನ ಚಾಲಕರು ಧರಿಸುವಂಥ) ಕೂಲಿಂಗ್ ಗ್ಲಾಸ್ ಹಾಕಿಕ್ಕೊಂಡಿದ್ದ.

ಬಲಗೆ ಪ್ಯಾಂಟಿನ ಜೇಬಿನಲ್ಲಿದೆ. ಎಡಗೈನಲ್ಲಿ ಸ್ವ್ಯಾ ಅಮೆರಿಕನ್ ರಿವಲ್ವಾರ್ ಇದೆ ಅನಿರೀಕ್ಷಿತವಾಗಿ ಬಂದ ಭಯಂಕರ ಮೂರ್ತಿಯನ್ನು ನೋಡಿ ಪತ್ತೇದಾರರಿಗೆ ಅತ್ಯಂತ ವಿಸ್ಮಯವಾಯಿತು.

ಅದು ನಡುಹಗಲಿನಲ್ಲಿ ಸುಪ್ರಸಿದ್ಧ ಪತ್ತೇದಾರರ ಮನೆಯನ್ನು ಪ್ರವೇಶಿಸ ಬೇಕಾದರೆ ಸಾಮಾನ್ಯ ಚೋರನ ಕೈಲಿ ಸಾಧ್ಯವಲ್ಲದ ಕಾರ್ಯ.

ಇವನ್ಯಾರೋ ಪಕ್ಕಾ ಥಕಾಯಿತಿಯೋ ಇರಬೇಕು. ಬೊಂಬಾಯಿಯಲ್ಲಿ ಈ ರೀತಿ ಹಗಲಿನಲ್ಲಿ ಪತ್ತೇದಾರರ ಮನೆಗೆ ನುಗ್ಗಿ ಬೆದರಿಕೆ ಹಾಕುವ ಭಯಂಕರ ಚೋರಶಿಕಾಮಣಿಗಳಿದ್ದರೆಂದು ಬೊಂಬಾಯಿನ ಪತ್ತೇದಾರ ವಿಲಿಯಂ ಶಂಕರ್‌ಗೆ ಹೇಳಿದ.

ಇವನು ಯಾರೋ ಬೊಂಬಾಯಿ ದರೋಡೆಗಾರರ ಗ್ಯಾಂಗಿನವನಿರಬೇಕೆಂದು ಶಂಕರ್ ಊಹಿಸಿದ. ಅವನೇಕೆ ಬಂದಿದ್ದಾನೆ ಎಂಬ ವಿಷಯದಲ್ಲಿ ಶಂಕರ್‌ನಿಗೆ ಕುತೂಹಲ ಕೆರಳಿತು.

ಎದುರಿಗೆ ರಿವಲ್‌ವಾರ್ ಧಾರಿಯಾಗಿ ನಿಂತಿರುವ ಯುವಸ್ವರೂಪಿಯನ್ನು ನೋಡಿದಾಗ್ಯೂ ಪತ್ತೇದಾರರ ಮುಖದಲ್ಲಿ ಭಯವಿರಲಿಲ್ಲ.

ಅವರ ದೇಹದಲ್ಲಿ ಕಂಪನವಿರಲಿಲ್ಲ ಸಾಹಸ ಕಾರ್ಯಗಳೇ ಧ್ಯೇಯವಾಗಿಟ್ಟುಕೊಂಡು ಹಗಲುರಾತ್ರಿ ದರೋಡೆಗಾರರೊಡನೆ ಸರಸವಾಡುತ್ತಿರುವ ಪತ್ತೇದಾರರಿಗೆ ಹೆದರಿಕೆ ಎಲ್ಲಿ ಬಂತು, ಸಾವಿಗಂಜುವ ಹೇಡಿತನ ಎಲ್ಲಿ ಬರಬೇಕು.

"ನೀನು ಯಾರು ?"

"ನಾನು ಯಾರು ? ಅದರಿಂದ ನಿನಗೇನು ಪ್ರಯೋಜನ ಶಂಕರ್. ನೀನು ನಾನು ಯಾರು ? ಎಂಬುದನ್ನು ಕಂಡುಹಿಡಿ. ಮೋಹನ್‌ಚಂದ್‌ನನ್ನು ಕೊಂದವನು ನಾನೇ. ಇನ್ನು ಒಂದು ಕೊಲೆಮಾಡಬೇಕಾಗಿ ಬರಬಹುದು. ಅದನ್ನು ಮಾಡುತ್ತೇನೆ ಈಗಲೇ ನಿಮ್ಮಿಬ್ಬರನ್ನು ಸುಟ್ಟುಬಿಡಬಹುದು. ಆದರೆ ಅದರಿಂದ ನನಗೇನು ಬಾಧವಿಲ್ಲ. ಯಾವ ಲಾಭವೂ ಇಲ್ಲದೆ ನಿಮ್ಮಂಥ ಹಸುಗೂಸುಗಳನ್ನೇಕೆ ಕೊಲೆಮಾಡಲಿ. ನಾವು ಮಹಾ ಸಾಹಸಿಗಳು ಎಂದು ಹೇಳಿಕೊಳ್ಳುತ್ತಿರಲ್ಲ. ನಿಮ್ಮ ಸಾಹಸದ ಪರೀಕ್ಷೆಯನ್ನು ಮಾಡುತ್ತೇನೆ. ಹಾಗೆಯೇ ನನ್ನ ಸಾಹಸದ ಪರಿಚಯ ನಿಮಗೂ ತಿಳಿದಿರಲಿ."

ನಂ 1."

ಮತ್ತೊಬ್ಬ ಧಡೂತಿಯಾದ ವ್ಯಕ್ತಿ ಒಳಗೆ ಪ್ರವೇಶಿಸಿದ.

ಪತ್ತೇದಾರರಿಬ್ಬರಿಗೂ ಅವರ ಮನೆಯಲ್ಲೇ ಕೊಂಚ ಸತ್ಕಾರ ಮಾಡಬೇಕು. ಆದಿನ ರೈಲಿನಿಂದ ಹೊಡೆದುಕ್ಕೊಂಡು ಬಂದಿವಲ್ಲ ಆ ಸುಂದರಿ.... ಅವಳ ಹೆಸರು....ಸಿನಿಮಾ ಪ್ರಪಂಚದ ಹಕ್ಕಿ ಲೀಲಾ....ಎಷ್ಟು ಕಷ್ಟಪಟ್ಟು ಹಾರಿಸಿಕ್ಕೊಂಡು ಬಂದಿದ್ದೆವು ಆ ಸುಂದರ ಹಕ್ಕಿಯನ್ನ.

ಆ ಸುಂದರಿಯ ಮೇಲೆ ಕೊಲೆ ಅಪವಾದ ಬೇರೆ ಇತ್ತು. ಅದು ನಿಮ್ಮನ್ನು ಬಿಟ್ಟು ಹೊರಗೆ ಹೋಗುವಂತೆಯೂ ಇರಲಿಲ್ಲ.

ಅನೇಕ ತೊಂದರೆಗಳಿಂದ ಹೊಡೆದುಕ್ಕೊಂಡು ಬಂದಿದ್ದ ಹಕ್ಕಿಗೆ ಒಂದು ಮುತ್ತುಕೊಡುವ ಅದೃಷ್ಟವು ನಮಗಿರಲಿಲ್ಲ.

ಆರಾತ್ರಿ ನಮ್ಮ ಕಡೆಯವನಿಗೆ ಕೈಕೊಟ್ಟು ಓಡಿಹೋಯಿತು. ನಾವೇ ಪಂಚರಂಗಿಗಳು ಅಂದರೆ ನಮಗಿಂತ ಒಂದು ಕೈಮೇಲು, ನಿಮ್ಮಂಥವರಿಗೆ ಬತ್ತಿ ಕೊಟ್ಟು ಓಡಿಹೋಯಿತು

ಆ ಹಕ್ಕಿ ಇನ್ನೆಷ್ಟು ಇರಲು ಸಾಧ್ಯವಿಲ್ಲ. ಇನ್ನೆಲ್ಲಿಗಾದರು ಅದು ಹೋದರೆ ಐದುಸಾವಿರ ರೂಪಾಯಿನಾಸೆಗೆ ಅವನ್ನು ಪೋಲೀಸರ ವಶಕ್ಕೊಪ್ಪಿಸಿ ಬಿಡುತ್ತಾರೆ. ಹೊರಗಡೆ ಓಡಾಡಿದರೆ ಪೋಲೀಸರು ಹಿಡಿದೇ ಬಿಡುತ್ತಾರೆ. ಅದು ಅಡಗಿರಬೇಕಾದ ಸ್ಥಳವೆಂದರೆ ಈ ಪತ್ತೇದಾರರ ಮನೆಯಲ್ಲಿಯೇ, ಅವಳನ್ನು ಅಡಗಿಸಿಡುವಂಥ ಧೈರ್ಯ ಚಾಕಚಕ್ಯತೆ ಇರುವ ಮಾನವರೆಂದರೆ ಈ ಪತ್ತೇದಾರರೇ, ಇವರಿಂದ ಹಕ್ಕಿಯನ್ನು ಹಾರಿಸಿಕ್ಕೊಂಡು ಹೋಗಬೇಕು."

"ಶಂಕರ್ ಅವಳೆಲ್ಲಿ"

"ಯಾರು ?"

"ಲೀಲಾವತಿ."

"ಯಾವ ಲೀಲಾ."

"ಯಾವ ಲೀಲನೋ ?........ನಂಬರ್ ಒನ್."

"ಛಳೀರ್.... ಛಳೀರ್."

ಹಂಟಿಂಗ್‌ನಿಂದ ಶಂಕರ್‌ಗೆ ಒಂದು ಬಲವಾದ ಹೊಡೆತ ಬಿತ್ತು. ಅರು

ಗೇಂದ್ರ ಅದೇ ಹಂಟಿಂಗನ್ನು ಎಳೆದುಕೊಂಡು ಆ ಧಡಿಯನ ಕಡೆ ಒಂದು ಬೀಸಿದ.

"ಅಯ್ಯೋ....."

ಎರಡನೆ ಏಟನ್ನು ಹೊಡೆಯಲು ಅರುಗೇಂದ್ರ ಹಂಟಿಂಗ್ ಎತ್ತಿದ.

"ಎಚ್ಚರಿಕೆ ಅರುಗೇಂದ್ರ. ಹಂಟಿಂಗ್ ಅವನಿಗೆ ಕೊಟ್ಟುಬಿಡು. ನಿನ್ನ ಒಂದು ಬೆರಳು ಅಳ್ಳಾಡಿದರೆ ಗುಂಡು ಹಾರುತ್ತವೆ ಎಂಬ ವಿಷಯ ನೆನಪಿರಲಿ. ಅನ್ಯಾಯವಾಗಿ ಯೌವನದ ಸುಖವನ್ನನುಭವಿಸುವುದಕ್ಕೆ ಮುಂಚೆಯೇ ಪರ ಲೋಕಕ್ಕೆ ಟಿಕೇಟ್ ತೆಗೆದುಕೊಳ್ಳಬೇಡ. ನಾವು ಹೇಳಿದಂತೆ ಕೇಳದಿದ್ದರೆ ಇಬ್ಬರನ್ನು ಸುಟ್ಟು ಭಸ್ಮಮಾಡಿಬಿಡುತ್ತೇನೆ. ನಿಮ್ಮ ಸುಂದರಿಯನ್ನು ನಮಗೆ ಕೊಟ್ಟುಬಿಡಿ. ಇಲ್ಲದಿದ್ದರೆ...."

ಅರುಗೇಂದ್ರ ಹಂಟಿಂಗನ್ನು ಕೆಳಗೆ ಹಾಕಿದ

"ಈ ಸುಪ್ರಸಿದ್ಧ ಬಿಸಿರಕ್ತದ ಸಾಹಸಿ ಅರುಗೇಂದ್ರನನ್ನು ಹಗ್ಗಗಳಿಂದ ಬಂಧಿಸು."

ಆ ಧಡಿಯ ಅರುಗೇಂದ್ರನ ಕೈಕಾಲುಗಳಿಗೆ ಬಿಗಿಯಾಗಿ ಹಗ್ಗ ಕಟ್ಟಿದ.

"ಇವನನ್ನು ಕಾರಿನಲ್ಲಿ ಬಿಸಾಕು."

"ಆ ಧಡಿಯ ಅರುಗೇಂದ್ರನನ್ನು ಎತ್ತಿಕೊಂಡು ಹೋಗಿ ಕಾರಿನಲ್ಲಿ ಹಾಕಿದ."

"ಶಂಕರ್, ಇನ್ನೂ ಮೂರು ದಿನಗಳ ಅವಧಿಯನ್ನು ನಿನಗೆ ಕೊಟ್ಟಿರುತ್ತೇನೆ. ಅಷ್ಟರಲ್ಲಿ, ನನ್ನ ಆ ಸುಂದರ ಸಿನಿಮಾ ನಟಿ ಲೀಲಾಳನು ಎಲ್ಲಿ ಬಚ್ಚಿಟ್ಟಿದ್ದರು ಸರಿ ಹೊರಗೆ ತಂದು ಇಂದಿಗೆ ಮೂರನೆ ದಿನ ರಾತ್ರಿ ಹನ್ನೆರಡು ಗಂಟೆಗೆ ಸರಿಯಾಗಿ ಬೊಂಬಾಯಿನ ಗೇಟ್‌ವೇ ಆಫ್ ಇಂಡಿಯಾದ ಬಳಿ ಒಂದು ಕರಿಯ ಓಲ್ಡ್ಸ್ ಮೊಬೈಲ್ ಕಾರು ಬರುತ್ತದೆ. ಅದರೊಳಗೆ ಅವಳನ್ನು ಕುಡಿಸಿಬಿಡು. ಅಲ್ಲಿ ಪೋಲೀಸರೊಡನೆ ನೀನು ಬಂದರೆ ಇಲ್ಲದ ತೊಂದರೆಗೊಳಗಾಗುತ್ತೀಯೇ ಶಂಕರ್. ನಿನ್ನ ಪ್ರತಿಯೊಂದು ಚಲನವಲನಗಳು ನಮ್ಮ ಗುಪ್ತಚಾರರು ಪ್ರತಿ ಅರ್ಧಗಂಟೆಗೊಂದಾವರ್ತಿ ನನಗೆ ತಿಳಿಸುತ್ತಾರೆ. ನಮ್ಮ ಕಣ್ಣು ಮರೆಯಲ್ಲಿ ನೀನು ಏನನ್ನೂ ಮಾಡುವುದು ಸಾಧ್ಯವಿಲ್ಲ. ಆ ರೀತಿ

ಮಾಡಲು ಪ್ರಯತ್ನಪಟ್ಟರೆ ಅದು ನನಗೆ ತಿಳಿದರೆ ನಿನಗೆ ಅತ್ಯಂತ ಭಯಂಕರ ತೊಂದರೆಗಳಾಗುತ್ತದೆ.

"ಮತ್ತೊಂದು ಮುಖ್ಯವಾದ ವಿಷಯ, ನಾನು ಹೇಳಿದಂತೆ ನೀನು ಆ ರಾತ್ರಿ ಗೇಟ್‌ವೇ ಆಫ್ ಇಂಡಿಯಾದ ಬಳಿ ಆ ಸುಂದರಿಯೊಡನೆ ಬರದಿದ್ದರೆ ನಿನ್ನ ಆಪ್ತ ಮಿತ್ರ, ನಿನ್ನ ಪತ್ತೇದಾರಿಕೆಯ ಬಲಗೈಯಂತಿರುವ ಈ ಅರುಗೇಂದ್ರ ವಿಜಯನ ರುಂಡವನ್ನು ನಿನಗೆ ಪಾರ್ಸಲ್ ಮಾಡುತ್ತೇನೆ. ಜೊತೆಗೆ ನಿನ್ನನ್ನು ತುಂಡುತುಂಡಾಗಿ ಕತ್ತರಿಸಿ ಹಾಕಿಬಿಡುತ್ತೇನೆ. ನನ್ನ ಎದುರಾದ ಯಾವ ಮಾನವ ಪ್ರಾಣಿಯೂ ಇದುವರೆಗೂ ಜಗತ್ತಿನಲ್ಲಿ ಜೀವದಿಂದಿಲ್ಲ. ನಿನ್ನ ಯಾವ ತಂತ್ರಗಳು ಕಪಟ ಬಲೆಗಳಿಗೂ ಬೀಳುವ ಬಕವಲ್ಲ ನಾನು ಎಂಬುದನ್ನು. ಚೆನ್ನಾಗಿ ಮನಸ್ಸಿನಲ್ಲಿ ಗಟ್ಟಿಮಾಡಿಕೋ—ವೃಥಾ ನನ್ನನ್ನು ಮೋಸದಿಂದ ಹಿಡಿ ಯುವ ಪ್ರಯತ್ನಕ್ಕೆ ಕೈ ಹಾಕಿ ಪ್ರಾಣವನ್ನು ಕಳೆದುಕೊಳ್ಳಬೇಡ. ಶಂಕರ್— ಎಚ್ಚರಿಕೆ—ಸಾವಿನೊಂದಿಗೆ ಸರಸವಾಡುವ ಸಾಹಸ ಕಾರ್ಯಕ್ಕೆ ಕೈ ಹಾಕಬೇಡ. ನಿನ್ನ ಗೆಳೆಯನ ರುಂಡವನ್ನು ಕಾಣುವ ಆಸೆ ಇದ್ದರೆ ಮಾತ್ರ ಆ ಕಾರ್ಯಕ್ಕೆ ಕೈ ಹಾಕು. ಬಹಳ ಎಚ್ಚರಿಕೆ. ನನ್ನ ಈ ಮಾತುಗಳನ್ನು ಮೀರಿ ನಡೆಯಬೇಡ."

—ಆ ವ್ಯಕ್ತಿ ನಿಧಾನವಾಗಿ ಹಿಂದಕ್ಕೆ ಹೋಗಿ ಬಾಗಿಲು ಹಾಕಿಕೊಂಡು ಸರ್ರನೆ ಓಡಿಹೋಗಿ ಕಾರಿನಲ್ಲಿ ಕುಳಿತುಕೊಂಡಿತು. ಕಾರು ಶರವೇಗದಲ್ಲಿ ಪಕ್ಕದ ಗಲ್ಲಿಯಲ್ಲಿ ತಿರುಗಿಕ್ಕೊಂಡಿತು. ಶಂಕರ್ ಹೊರಗೆ ಬರುವ ಹೊತ್ತಿಗೆ ಕಾರು ಬಹಳ ದೂರ ಹೊರಟುಹೋಗಿದ್ದಿತು. ಶಂಕರ್ ಅಲ್ಲಿಯೇ ಇದ್ದ ಸೋಫದ ಮೇಲೆ ಕುಳಿತುಕೊಂಡ. ಜೇಬಿನಿಂದ ಒಂದು ಸಿಗರೇಟು ಹಚ್ಚಿದ. ಅನಿರೀಕ್ಷಿತ ವಿಸ್ಮಯಕಾರಿ ಘಟನೆಗಳು ಮಿಂಚಿಗಿಂತ ವೇಗವಾಗಿ ನಡೆದು ಹೋಗಿತ್ತು. ಈ ರೀತಿ ಆಗಬಹುದೆಂದು ಶಂಕರ್ ಕನಸು ಮನಸಿನಲ್ಲಿಯೂ ಕಲ್ಪಿಸಿರಲಿಲ್ಲ.

ಈ ಬೊಂಬಾಯಿ ದಗಾಕೋರರ ಸಹವಾಸ ಅತ್ಯಂತ ಅಪಾಯಕಾರಿ ಎಂಬುದು ಶಂಕರ್‌ನ ಗಮನಕ್ಕೆ ಬಂದಿತ್ತು. ಅತ್ಯಂತ ಚತುರತೆಯಿಂದ ಇವನ ಕೈಗೆ ಕೋಳವನ್ನು ತೊಡಿಸಬೇಕೆಂದು ಶಂಕರ್ ನಿರ್ಧರಿಸಿಕೊಂಡ. ಮೃತ್ಯುವಿನ ದವಡೆಯಿಂದ ಅರುಗೇಂದ್ರನನ್ನು ಯಾವ ರೀತಿ ಬಿಡಿಸಿಕೊಂಡು ಬರುವುದು ಎಂದು ಶಂಕರ್ ಆಲೋಚಿಸತೊಡಗಿದ.

ಗೇಟ್ ವೇ ಆಫ್ ಇಂಡಿಯಾದ ಬಳಿ ಬರುವ ಕಾರಿನಲ್ಲಿ ಆ ಸುಂದರಿಯನ್ನು ಕೂಡಿಸದಿದ್ದರೆ, ಆ ಭಯಂಕರ ಮೂರ್ತಿ ತಾನಾಡಿದಂತೆ ಅರುಗೇಂದ್ರನ ತಲೆಯನ್ನು ತನಗೆ ಪಾರ್ಸಲ್ ಮಾಡುವುದರಲ್ಲಿ ಶಂಕರ್‌ಗೆ ಯಾವ ಸಂಶಯವೂ ಇರಲಿಲ್ಲ. ಅವನು ಹೇಳಿದಂತೆ ಅವಳನ್ನು ಆ ಕಾರಿನಲ್ಲಿ ಕೂಡಿಸಬೇಕು. ಮತ್ತೆ ಆ ಕಾರನ್ನು ಅಲ್ಲಿಯೇ ಉಪಾಯದಿಂದ ಹಿಡಿಯಬೇಕು. ಈ ದಿನವೇ ಗುಪ್ತ ವೇಷದಿಂದ ಬೊಂಬಾಯನ್ನು ಪ್ರವೇಶಿಸಿ, ಅಲ್ಲಿ ಇವರ ಗ್ಯಾಂಗಿನ ಚಲನವಲನಗಳನ್ನು ಸೂಕ್ಷ್ಮವಾಗಿ ಗಮನಿಸಬೇಕು. ಈ ಭಯಂಕರ ಮೂರ್ತಿಗಳ ಗುಪ್ತ ಕಾರಸ್ಥಾನವನ್ನು ಪತ್ತೇ ಹಚ್ಚಬೇಕು. ಇವರುಗಳ ಪ್ರತಿಯೊಂದು ಚಲನವಲನಗಳನ್ನು ಅತ್ಯಂತ ಜಾಗರೂಕತೆಯಿಂದ ಈಕ್ಷಿಸಬೇಕು. ಈ ಭಯಂಕರ ಮೂರ್ತಿಯ ಗ್ಯಾಂಗಿನವರು ನನ್ನ ಮೇಲೆ ಸದಾ ಕಣ್ಣಿಟ್ಟಿರುತ್ತಾರೆ. ಇವರುಗಳ ಕಣ್ಣು ತಪ್ಪಿಸಿ ನಾನು ಗುಪ್ತ ವೇಷದಲ್ಲಿ ಬೊಂಬಾಯಿ ಸೇರುವುದು ಅತ್ಯಂತ ಪ್ರಯಾಸದ ಕಾರ್ಯವೇ ಸರಿ. ಆದರೂ ಅದನ್ನು ಮಾಡಬೇಕು.

ಜೊತೆಗೆ ಲೀಲಾಳನ್ನು ಬೊಂಬಾಯಿಗೆ ಕರೆದುಕೊಂಡು ಹೋಗಬೇಕು. ಅವಳ ಮೇಲೆ ಪೋಲೀಸರ ಸರ್ಪದೃಷ್ಟಿಯಿದೆ.

ಪೋಲೀಸರ ಸರ್ಪದೃಷ್ಟಿಯನ್ನು ತಪ್ಪಿಸಿ ಅವಳನ್ನು ಬೊಂಬಾಯಿಗೆ ಕರೆದುಕೊಂಡು ಹೋಗಿ ಅಲ್ಲಿ ಆ ಪಿಶಾಚಿಯ ಮಾತಿನಂತೆ ಆ ಕಾರಿನಲ್ಲಿ ಅವಳನ್ನು ಕೂಡಿಸಬೇಕು. ಅವರು ಅರುಗೇಂದ್ರನನ್ನು ಬಿಡುಗಡೆ ಮಾಡುವುದು ಸುಳ್ಳು.

ನಾನೇ ಯಾವುದಾದರೂ ಸರಿಯಾದ ಯೋಚನೆಯನ್ನು ಹಾಕಿ ಅರುಗೇಂದ್ರನನ್ನು ಬಿಡಿಸಿಕೊಳ್ಳಬೇಕು.

ಎಂಥ ಭಯಂಕರ ಪಿಶಾಚಿಗಳು.

ಹಗಲಿನಲ್ಲೇ ಎಂತೆಂಥ ರೋಮಾಂಚಕಾರಿ ಕಾರ್ಯಗಳನ್ನು ಮಾಡುತ್ತಾರೆ. ನನ್ನ ಎದುರಿನಲ್ಲೇ ಅರುಗೇಂದ್ರನನ್ನು ನಡು ಹಗಲಿನಲ್ಲಿ ಬಂಧಿಸಿಕೊಂಡು ಹೋಗಿರಬೇಕಾದರೆ, ನನಗೆ ಹಂಟಿಂಗ್‌ನಿಂದ ಬಾರಿಸಿರಬೇಕಾದರೆ ಈ ಕರಾಳ ಹೃದಯದ ಪ್ರೇತ ಪರಿವಾರದ ಧೈರ್ಯವೆಷ್ಟಿರಬೇಕು. ಬೆಂಗಳೂರು ಬೊಂಬಾಯಿಗಳಲ್ಲಿ ಗ್ಯಾಂಗುಗಳನ್ನಿಟ್ಟುಕೊಂಡು ಇಡೀ ಭಾರತದ

ನಾನಾ ಮೂಲೆಗಳಲ್ಲಿ ಕೊಲೆ ದರೋಡೆ ಸುಲಿಗೆಗಳನ್ನು ಮಾಡುತ್ತಿರುವ ಈ ಭಯಂಕರ ಮೂರ್ತಿಯ ಭಯಂಕರ ವ್ಯಾಪಾರಕ್ಕೆ ಅಪರಾಧದ ಸಾಲುಗಳಿಗೆ, ಸಾಲುಸಾಲು ಕಗ್ಗೊಲೆಗಳಿಗೆ, ಹೇಗಾದರೂ, ಎಂತಹ ಕಷ್ಟಗಳು ಬಂದರೂ ಹೆದರದೆ ಈ ಎಲ್ಲಾ ಪಾಪಕಾರ್ಯಗಳಿಗೂ ಪೂರ್ಣ ವಿರಾಮವನ್ನು ಹಾಕಲೇ ಬೇಕು.

ಮೊದಲು ಅರುಗೇಂದ್ರನನ್ನು ಈ ಭಯಂಕರ ಮೂರ್ತಿಗಳ ಮೃತ್ಯು ಪಂಜರದಿಂದ ಹೊರತರಬೇಕು. ಆಮೇಲೆ ಮುಂದಿನ ಕಾರ್ಯ. ಶಂಕರನ ತಲೆಯ ತುಂಬ ನಡೆದುಹೋದ ಭಯಂಕರ ಘಟನೆ, ನಡೆಯಲಿರುವ ಭಯಂಕರ ವ್ಯಾಪಾರಗಳು, ತಾನು ಇಡಬೇಕಾದ ಹೆಜ್ಜೆ, ಅತ್ಯಂತ ಅವಶ್ಯಕವಾದ ಬೊಂಬಾಯಿನ ಪ್ರಯಾಣ, ಗೆಳೆಯ ಅರುಗೇಂದ್ರನ ಬಿಡುಗಡೆ—ಈ ವಿಚಾರಗಳೇ ತುಂಬಿದ್ದವು. ಅವನ ತುಟಿಯಂಚಿನಲ್ಲಿ ಅವನ ಸ್ಫೂರ್ತಿದಾಯಿನಿ ವೈಕ್ರೋಪೋಲೋ ಸಿಗರೇಟೊಂದು ಹೊಗೆಯಾಡುತ್ತಾ ಕುಳಿತಿದ್ದಳು.

ಬಾಯಿತುಂಬಾ ಸಿಗರೇಟಿನ ಹೊಗೆ.

ತಲೆಯತುಂಬಾ ಯೋಚನೆಗಳು ತುಂಬಿದ್ದವು.

೫

ಶಂಕರ್ ಬೊಂಬಾಯಿಗೆ ಹೋಗುವುದನ್ನು ನಿರ್ಧರ ಮಾಡಿದ. ಅರು ಗೇಂದ್ರನ ಬಿಡುಗಡೆ ಅತಿ ಮುಖ್ಯ ಕಾರ್ಯ. ಅದಕ್ಕಾಗಿ ಅವನು ಬೊಂಬಾ ಯಿಗೆ ಹೋಗಲೇಬೇಕಾಯಿತು. ಈ ಭಯಂಕರ ದರೋಡೆಗಾರರ ಕಾರಸ್ಥಾನ ಬೊಂಬಾಯಿ ಆಗಿದ್ದಿತು. ಬೊಂಬಾಯಿ, ಬೆಂಗಳೂರು ಮುಂತಾದ ಊರು ಗಳಲ್ಲಿ ಭಯಂಕರ ದರೋಡೆಗಳನ್ನು ನಡೆಸುತ್ತಿದ್ದರು. ಅರುಗೇಂದ್ರನನ್ನು ಬಂಧಿಸಿ, ಬೊಂಬಾಯಿಗೆ ಒಯ್ದಿದ್ದರು.

ಶಂಕರ್ ಬೊಂಬಾಯಿನ ವಿಕ್ಟೋರಿಯಾ ಟರ್ಮಿನಸ್‌ನಲ್ಲಿ ಇಳಿದ. ಅವನು ಸಾಹೇಬು ವೇಷದಲ್ಲಿದ್ದ. ಅವನ ಜೊತೆಯಲ್ಲಿದ್ದ ಲೀಲಾ ಸಹ ಮುಸ್ಲಿಂ ಹೆಂಗಸನಂತೆ ಮುಖಕ್ಕೆ ಬುರುಕ ಹಾಕಿಕೊಂಡಿದ್ದಳು. ಇಬ್ಬರು ಮುಸ್ಲಿಂ ದಂಪತಿಗಳಂತಿದ್ದರು.

ಶಂಕರ್ ವಿಕ್ಟೋರಿಯಾ ಟರ್ಮಿನಸ್‌ನಲ್ಲಿ ಇಳಿದೊಡನೆ ಅಲ್ಲಿಂದ ಟ್ಯಾಕ್ಸಿ ಯಲ್ಲಿ ಕುಳಿತುಕೊಂಡು ಬಾಂಬೆ ಕೆಫೆಗೆ ಹೋದ. ಅಲ್ಲಿ ಒಂದು ಡಬ್ಬಲ್ ಬೆಡ್‌ರೂಂ ಬಾಡಿಗೆಗೆ ತೆಗೆದುಕೊಂಡು ಲೀಲಾದೇವಿಯನ್ನು ಆ ಕೊಠಡಿ ಯಲ್ಲಿಟ್ಟ.

ಮತ್ತೆ ಅಲ್ಲಿಂದ ಚರ್ಚ್ ಗೇಟಿನ ಬಳಿ ತನ್ನ ಮಾನ್ಯ ಮಿತ್ರ ಸಿ. ಐ. ಡಿ ರಾಮಚಂದ್ ಮನೆಯ ಕಡೆ ಹೊರಟ. ರಾಮಚಂದ್ ಮನೆಯಲ್ಲಿಯೇ ಇದ್ದರು. ಶಂಕರ್‌ನಿಗೆ ವಿಶ್ವಾಸಪೂರ್ವಕ ಸ್ವಾಗತವನ್ನೀಡಿದ.

"ಏನಯ್ಯ ಶಂಕರ್, ಬೆಂಗಳೂರಿನಿಂದ ಬೊಂಬಾಯಿಗೆ ಪಾದ ಬೆಳ ಸಿದ್ದು ?"

"ಯಾವುದೋ ಒಂದು ಕೇಸಿನ ಜಾಡು ಹಿಡಿದು. ಒಂದು ಡಕಾಯಿತಿ ಗುಂಪನ್ನು ಹಿಡಿಯಲು ಅಲ್ಲಿಂದ ಇಲ್ಲಿಗೆ ಬಂದಿದ್ದೇನೆ. ನಿನ್ನ ಸಹಕಾರ ಅತ್ಯಗತ್ಯವಾಗಿದೆ."

"ಅದಕ್ಕೇನು, ನಿನಗೋಸ್ಕರ ಎಂಥ ಸಹಾಯವನ್ನಾದರೂ ಮಾಡಲು ತಯಾರಾಗಿದ್ದೇನೆ ಐ. ಜಿ. ಪಿ. ಯವರಿಗೂ ನೀನು ಬಂದಿರುವ ವಿಷಯವನ್ನು ತಿಳಿಸಿ, ಎಲ್ಲಾ ಪೋಲೀಸ್ ಸ್ಟೇಷನ್‌ಗಳಿಂದಲೂ ಸಹಾಯ ದೊರೆಯುವಂತೆ ಮಾಡುತ್ತೇನೆ. ನಿನ್ನ ಕೇಸುಗಳು ತುಂಬ ಆಶ್ಚರ್ಯಕರವಾಗಿರುತ್ತವೆಯಂತೆ. ಈ ಕೇಸಿನ ವಿಷಯ ನನಗೆ ಕೊಂಚ ಹೇಳಲು ಸಾಧ್ಯವೇನಯ್ಯಾ?"

"ಅದಕ್ಕೇನು?"

ಅಷ್ಟುಹೊತ್ತಿಗೆ ಒಬ್ಬ ಉಷ್ಣನಾದ ವ್ಯಕ್ತಿ ಬಂದ.

"ಇವರ್ಯಾರು?"

"ಇವರ ಹೆಸರು ಚಂದ್ರಕುಮಾರ್ ಎಂದು. ರಿಟೈರ್ಡ್ ಕಮ್ಯಾಂಡರ್."

"ನಮಸ್ಕಾರ."

"ಇವರೇ ಸುಪ್ರಸಿದ್ಧ ಪತ್ತೇದಾರ್ ಶಂಕರ್"

"ನಮಸ್ಕಾರ."

"ಏನು ತಾವು ಬೊಂಬಾಯಿಗೆ ಬಂದಿರುವುದು?"

"ಯಾವುದೋ ಒಂದು ಕೇಸಿನ ಜಾಡು ಹಿಡಿದು ಬಂದಿದ್ದೇನೆ"

"ಅಂದರೆ ಯಾವುದೋ ಒಂದು ವ್ಯಕ್ತಿಯನ್ನು ಹುಡುಕಿಕೊಂಡು ಬಂದಿದ್ದೀರಾ ಅನ್ನಿ."

"ಹೌದು."

"ಇನ್ನೊಂದು ಸಲ ಪುರುಸೊತ್ತಾಗಿ ನಿಮ್ಮೊಡನೆ ಮಾತಾಡುತ್ತೇನೆ. ಈಗತಾನೆ ರೈಲಿನಿಂದ ಬಂದಿದ್ದೀರಾ. ಕೊಂಚ ರೆಸ್ಟ್ ತೆಗೆದುಕೊಳ್ಳಿ."

—ಚಂದ್ರಕುಮಾರ್ ಶಂಕರನಿಗೆ ವಂದಿಸಿ ಅಲ್ಲಿಂದ ಹೊರಟುಹೋದ.

"ಇವರೆಲ್ಲಿ ಕೆಲಸ ಮಾಡುತ್ತಾರೆ?"

ಶಂಕರ್ ಚಂದ್ರಕುಮಾರನ ಬಗ್ಗೆ ರಾಮಚಂದ್ರನಲ್ಲಿ ವಿಚಾರಿಸಿದ

"ಎಲ್ಲಿ ಕೆಲಸ ಮಾಡುತ್ತಾನೆಯೋ ನನಗೆ ತಿಳಿಯದು. ಅಂತೂ ತುಂಬಾ

ಶ್ರೀಮಂತರು. ಅದಿರಲಿ ನಿನ್ನ ಕೇಸಿನ ವಿಷಯ ಹೇಳಯ್ಯಾ ಅಂದರೆ ಕೆಲಸಕ್ಕೆ ಬಾರದ ಪ್ರಶ್ನೆಗಳನ್ನು ಹಾಕುತ್ತೀಯಲ್ಲಯ್ಯಾ ?"

"ನೀನು 'ಜೈಪ್ರಕಾಶ್' ಎಂಬ ಹೆಸರನ್ನು ಕೇಳಿದ್ದೀಯಾ ರಾಮಚಂದ್?"

"ಅದೊಂದು ಅತ್ಯಂತ ಅಮೂಲ್ಯವಾದ ವಜ್ರ. ಅದು ಕಾಶ್ಮೀರದ ಒಬ್ಬ ಶ್ರೀಮಂತನಲ್ಲಿತ್ತು. ಮೊನ್ನೆ ಮೊನ್ನೆ ಅದನ್ನು ಮತ್ತೊಬ್ಬ ಶ್ರೀಮಂತನಿಗೆ ಮಾರಿದ."

"ಕೊಂಡವನು ಯಾರು ಗೊತ್ತೆ ?"

"ಇಲ್ಲ."

"ಮೊನ್ನೆ ಜನತಾ ಎಕ್ಸ್‌ಪ್ರೆಸ್ಸಿನಲ್ಲಿ ಕೊಲೆಯಾದವನಲ್ಲ ಮೋಹನ್‌ಚಂದ್ ಅದನ್ನು ಕೊಂಡವನು."

"ಹ್ಞಾ....! ಹೌದೇ ?"

"ಹೌದು !"

"ಹಾಗಾದರೆ ಆ ವಜ್ರಕ್ಕೂ ಈ ಕೊಲೆಗೂ ಸಂಬಂಧವಿದೆ ಅನ್ನು. ಮೋಹನ್‌ಚಂದ್‌ರವರನ್ನು ಕೊಲೆ ಮಾಡಿದವಳು ಒಬ್ಬ ಯುವತಿ ಎಂದು ತಿಳಿದುಬಂದಿದೆಯಲ್ಲ ?"

"ಪೋಲೀಸರು ಹೇಳುತ್ತಿರುವ ಯುವತಿ ಕೊಲೆಪಾತಕಿಯಲ್ಲ. ನಿರಪರಾಧಿ."

"ಹಾಗಾದರೆ ಅವಳೆಲ್ಲಿ— ಪೋಲೀಸರ ಕಣ್ಣು ಮರೆಯಲ್ಲೇಕೆ ಇದ್ದಾಳೆ ?"

"ಅವಳು ನನ್ನ ಬಳಿಯಲ್ಲಿಯೇ ಇದ್ದಾಳೆ."

"ಹೌದೇ ?"

"ಹೌದು. ಅವಳು ನಿರಪರಾಧಿ ಎಂದು ನಾನು ಸಾಕ್ಷೀಭೂತವಾಗಿ ಸಾಬೀತು ಮಾಡುತ್ತೇನೆ."

"ಯಾವ ರೀತಿ ?"

"ಕೊಲೆಗಾರನ ಕೈನಲ್ಲಿ ಹೇಳಿಸುತ್ತೇನೆ."

"ಏನೆಂದು ?"

"ನಾನು ಕೊಲೆ ಮಾಡಿ ಈಕೆಯ ವ್ಯಾನಿಟೀಬ್ಯಾಗನ್ನು ಹೆಣದಮೇಲೆ ಹಾಕಿದೆ ಎಂದು "

"ಈ ಕೇಸಿನ ಎಳೆ ಬೊಂಬಾಯಿನಲ್ಲಿಯೇ"

"ಈ ದರೋಡೆಕೋರರ ಕೇಂದ್ರವೇ ಬೊಂಬಾಯಿ-ಶ್ರೀನಗರದಿಂದ ವಜ್ರದೊಡನೆ "ಆಕಾಶದೂತ" ವಿಮಾನದಲ್ಲಿ ಬೊಂಬಾಯಿಯಲ್ಲಿ ಮೋಹನ್‌ಚಂದ್ ಇಳಿದೊಡನೆ, ವಜ್ರದ ಅಪಹರಣಕ್ಕಾಗಿ ಸಮಯ ಕಾಯುತ್ತಿದ್ದರು. ರೈಲಿನಲ್ಲಿ ಕೊಲೆ ಮಾಡಿ ಆ ಸಿನಿಮಾ ನಟಿಯ ಮೇಲೆ ಅಪವಾದ ಬರುವಂತೆ ಮಾಡಿದರು."

"ಪೋಲೀಸರು ಕೊಲೆಪಾತಕಿ ಎಂದು ಹೇಳುತ್ತಿರುವ ಯುವತಿ ಸಿನಿಮಾ ನಟಿಯೇ ?"

"ಹೌದು."

"ಆಕೆಯ ಹೆಸರು ?"

"ಲೀಲಾದೇವಿ."

"ಈಗ ಅವಳೆಲ್ಲಿದ್ದಾಳೆ ?"

"ನನ್ನೊಡನೆ ಬೊಂಬಾಯಿಗೆ ಕರೆತಂದಿದ್ದೇನೆ. ಬೊಂಬಾಯಿ ಕೆಫೆಯಲ್ಲಿ ಒಂದು ಕೊಠಡಿಯಲ್ಲಿಟ್ಟಿದ್ದೇನೆ."

"ಅವಳನ್ನೇಕೆ ಬೊಂಬಾಯಿಗೆ ಕರೆದುಕೊಂಡು ಬಂದೆ ?"

"ಕಾರಣವಿದೆ."

"ಅದೇನು ? ಕೊಂಚ ವಿವರವಾಗಿ ಹೇಳು ಶಂಕರ್."

—ಜನತಾ ಎಕ್ಸ್‌ಪ್ರೆಸ್ಸಿನಲ್ಲಿ ಮೋಹನ್‌ಚಂದ್ ವಜ್ರದೊಡನೆ ಬೆಂಗಳೂರಿಗೆ ಬರುತ್ತಿದ್ದರು. ಅವರ ಕ್ಯಾರೇಜಿನಲ್ಲಿ ಇಬ್ಬರು ಪ್ರಯಾಣಿಕರಿದ್ದರು. ಒಬ್ಬಳು ಸಿನಿಮಾ ನಟಿ ಲೀಲಾದೇವಿ. ಮತ್ತೊಬ್ಬ ಹಣ್ಣುಹಣ್ಣು ಮುದುಕ. ಅವನು ನಿಜವಾಗಲು ಮುದುಕನಲ್ಲ. ಮುದುಕವೇಷಧಾರಿಯಾದ ಒಬ್ಬ ಠಕಾಯಿತ. ಅದೇ ಕ್ಯಾರೇಜಿನ ಕಕ್ಕಸ್ಸಿನಲ್ಲಿ ಇಬ್ಬರು ಗೂಂಢಾಗಳು ಅವಿತಿಟ್ಟುಕೊಂಡಿದ್ದರು. ಅವರು ಮೋಹನ್‌ಚಂದ್‌ನನ್ನು ಕೊಲೆ ಮಾಡಿ ಶವದ ಮೇಲೆ ಲೀಲಾದೇವಿಯ ವ್ಯಾನಿಟೀಬ್ಯಾಗನ್ನು ಹಾಕಿ ಸರಪಳಿ ಎಳೆದು ರೈಲು ನಿಲ್ಲಿಸಿ ಸಿನಿಮಾ ನಟಿ ಲೀಲಾದೇವಿಯನ್ನು ಕೆಳಗಡೆ ಇಳಿಸಿ ರೈಲಿಗೆ ನೇರವಾಗಿ ಬರುತ್ತಿದ್ದ ಈ ಠಕಾಯಿತಿಗಳ ಕಾರಿನಲ್ಲಿ ಕುಳಿತುಕೊಳ್ಳುವಂತೆ ಮಾಡಿದರು.

ಅವಳ ರೂಪಕ್ಕೆ ಬೆರಗಾಗಿಯೇ ಇವರುಗಳು ಅಲ್ಲಿಂದ ಅವಳನ್ನು ಹೊಡೆದು ಕೊಂಡು ಬಂದಿದ್ದು. ಅವಳು ಹೊರಗೆ ಬರುವಂತೆಯೇ ಇರಲಿಲ್ಲ. ಅದಕ್ಕೆ ಕಾರಣ ಪೋಲೀಸಿನವರು

ಶವದ ಮೇಲಿದ್ದ ಲೀಲಳ ವ್ಯಾನಿಟಿಬ್ಯಾಗ್, ಅವಳು ರೈಲು ನಿಲ್ಲಿಸಿ ಇಳಿದು ಓಡಿಹೋಗಿದ್ದು ಮುಂತಾದುವುಗಳಿಂದ ಲೀಲಳೇ ಕೊಲೆಪಾತಕಿ ಎಂದು ನಿರ್ಧರಿಸಿ ಈಕೆಯ ಭಾವಚಿತ್ರದೊಡನೆ ಭಿತ್ತಿಪತ್ರಿಕೆಗಳನ್ನು ಮಾಡಿಸಿ, ಲೀಲಳೇ ಕೊಲೆಪಾತಕಿ, ಹಿಡಿದುಕೊಟ್ಟವರಿಗೆ ಐದುಸಾವಿರ ರೂಪಾಯಿ ಬಹುಮಾನ ಎಂದು ಸಾರಿದರು. ಠಕಾಯಿತಿಗಳ ವಿಕೃತಕಾಮ ತೃಪ್ತಿಪಡಿಸಲು ಈ ಸುಂದರಿ ಯಿರಲೆಂದು ನಿರ್ಧರ ಮಾಡಿದರು. ಠಕಾಯಿತಿಗಳ ಯಜಮಾನನಿಗೆ ಈಕೆ ಯನ್ನು ಅರ್ಪಿಸಲು ಒಂದು ಟ್ಯಾಕ್ಸಿಯಲ್ಲಿ ಈಕೆಯನ್ನು ವಿಲ್ಸನ್‌ಗಾರ್ಡನ್ನಿಗೆ ಕಳುಹಿಸುತ್ತಿದ್ದಾಗ, ದಾರಿಯಲ್ಲಿ ಈಕೆ ಡ್ರೈವರನಿಗೆ ಕಣ್ಣು ಹೊಡೆದಳು. ಅವನು ಈಕೆಯ ಸಂಜ್ಞೆಯಿಂದ ಏನು ಅರ್ಥ ಮಾಡಿಕೊಂಡನೋ ಏನೋ ಟ್ಯಾಕ್ಸಿ ಯನ್ನು ಇದ್ದಕಿದ್ದ ಹಾಗೆ ಬ್ರೇಕ್ ಹಾಕಿ ನಿಲ್ಲಿಸಿದ.

—ಈಕೆ ಟ್ಯಾಕ್ಸಿಯಿಂದಿಳಿದು ರಸ್ತೆಯಲ್ಲಿ ಗಲಾಟೆ ಮಾಡಿದಳು. ತಕ್ಷಣ ಗಲಾಟೆಯನ್ನು ನೋಡಲು ಜನ ಸೇರಿತು. ಈಕೆ ಉಪಾಯದಿಂದ ಆ ಗುಂಪಿನ ಗಲಾಟೆಯಿಂದ ತಪ್ಪಿಸಿಕೊಂಡು ಬಂದು "ಕೊಲೆಪಾತಕಿ ನಾನಲ್ಲ" ಎಂದು ಸತ್ಯ ಸಂಗತಿಯನ್ನು ಅರುಹಿದಳು. ನಾನು ಅವಳು ಹೇಳುತ್ತಿರುವುದು ಸತ್ಯ ಎಂದು ಮನದಟ್ಟು ಮಾಡಿಕೊಂಡು, ಈಕೆಯನ್ನು ಬಿಡಿಸಿ ನಿಜವಾದ ಹತ್ಯಾಕಾರಿ ಗಳನ್ನು ಬಯಲಿಗೆಳೆಯಲು ನಿಶ್ಚಯಿಸಿದೆ.

ಅದೇ ನನ್ನ ದಾರಿಯಲ್ಲಿ ಯಾವಾಗಲೂ ತಪ್ಪನ್ನು ಕಂಡುಹಿಡಿಯುವ ವಿಚಿತ್ರದ್ವೇಷಿ ಇನ್ಸ್‌ಪೆಕ್ಟರ್ ಬಾಲನ್ ಬಂದು ಏನೇನೋ ಬಾಯಿಗೆ ಬಂದಹಾಗೆ ಬೈಗುಳಿಹೋದ."

"ಆಮೇಲೆ ?"

"ಈಕೆ ನನ್ನಲ್ಲಿಗೆ ಬಂದಿರುವ ವಿಷಯ ಹೇಗೋ ಆ ಠಕಾಯಿತರಿಗೆ ತಿಳಿ ದುಹೋಗಿದೆ. ಇದ್ದಕ್ಕಿದ್ದ ಹಾಗೆಯೇ ನನ್ನ ಮನೆಗೆ ನುಗ್ಗಿ ನನ್ನ ಹಾಜರಿಯಲ್ಲಿ ನನ್ನ ಮಿತ್ರ ಅರುಗೇಂದ್ರನನ್ನು ಬಂಧಿಸಿ ಇಲ್ಲಿಗೆ ಕರೆದುಕೊಂಡು ಬಂದುಬಿಟ್ಟಿ ದ್ದಾರೆ."

"ನಡೆಯಿರಿ."

"ಬರುತ್ತೇನೆ ರಾಮಚಂದ್, ರಾತ್ರಿ ಎಂಟುವರೆಯ ಹೊತ್ತಿಗೆ ಬರುತ್ತೇನೆ."

"ಸರಿ."

ಶಂಕರ್ ಮತ್ತು ಚಂದ್ರಕುಮಾರ್ ನಿಧಾನವಾಗಿ ಹೊರಗೆ ಹೋದರು. ರಾಮಚಂದ್ ಏನನ್ನೋ ಆಲೋಚಿಸುತ್ತಾ ಕುಳಿತಿದ್ದ.

## ೬

ಅಬ್ಬಾ—ಎಂಥ ಕಾರ್ಮುಗಿಲ ಕಾರಿರುಳು. ಮಳೆಯ ಬೀಸಿಯಿಂದ ವಿದ್ಯುತ್‌ಶಕ್ತಿ ಕೆಟ್ಟುಹೋಗಿ ದೀಪಗಳು ಆರಿಹೋಗಿದ್ದುವು. ರಾತ್ರಿ ಹನ್ನೆರಡು ದಾಟಿದ್ದರಿಂದ ಜನಗಳ ಗಲಾಟೆ ಕೊಂಚ ಕಡಿಮೆಯಾಗಿತ್ತು. ಮೌನ ಆವರಿಸಿತ್ತು. ಆ ಭಯಂಕರ ಗಂಭೀರ ಮೌನವನ್ನು ಸೀಳಿಕೊಂಡು, ಆಗಾಗ್ಗೆ ಗುಡುಗು ನಿನಾದ ಕೇಳಿಬರುತ್ತಿತ್ತು. ಆ ಭಯಂಕರ ಕಾರ್ಗತ್ತಲು ಸೀಳುತ್ತಿತ್ತು—ಆ ಮಿಂಚಿನ ಬೆಳಕು ಮೂಡಿದಾಗ ಸಕಲ ಚರಾಚರಗಳು ನಿದ್ರಾದೇವಿಯ ಮಾಯದ ಸೆರಗಿನ ಮರೆಯಲ್ಲಿತ್ತು. ಕಳ್ಳಕಾಕರು, ವ್ಯಭಿಚಾರಿಗಳು ಮುಂತಾದ ಪಾಪಿಗಳಿಗೆ ಆ ರಾತ್ರಿ ಅನುಕೂಲವಾಗಿತ್ತು.

ಒಬ್ಬ ಕರಾಳ ಭಯಂಕರ ಮೂರ್ತಿ ಚೌಪಾತಿಯ ದಡದಲ್ಲಿ ಚುಟ್ಟಾ ಸೇದಿಕೊಂಡು ಹೋಗುತ್ತಿದ್ದ. ಆ ಭಯಕರ ಮೂರ್ತಿಯ ಕೈಲಿದ್ದ ಟಾರ್ಚು ಹತ್ತುತ್ತಾ ಆರುತ್ತಾ ಇದ್ದಿತು. ಅವನ ತುಟಿಯಂಚಿನಲ್ಲಿ ಸ್ಪೈಸರ್ ಚುಟ್ಟಾ ಉರಿಯುತ್ತಿತ್ತು. ಅವನು ಕರಿಯ ಉಲ್ಲನ್ ಪ್ಯಾಂಟು ಧರಿಸಿದ್ದ. ಕರಿಯ ಇವಿನಿಂಗ್ ಹ್ಯಾಟ್ ಧರಿಸಿದ್ದ. ಕರಿಯ ಲಾಂಗ್ ಕೋಟು ಧರಿಸಿದ್ದ. ಅವನ ಎಡಗೈ ಲಾಂಗ್‌ಕೋಟಿನ ಜೇಬಿನಲ್ಲಿತ್ತು. ಬಲಗೈನಲ್ಲಿ ಟಾರ್ಚ್ ಇದ್ದಿತು. ಆ ಐದುಮುಕ್ಕಾಲು ಅಡಿಯ ಕರಿಯ ಉಡುಪಿನ ವ್ಯಕ್ತಿ ಅತ್ಯಂತ ಭಯಂಕರನಾಗಿದ್ದ. ಅವನ ಎರಡು ಕಣ್ಣುಗಳು ಕೆಂಡದಂತೆ ಕೆಂಪಾಗಿದ್ದವು. ಅರ್ಧರಾತ್ರಿಯಲ್ಲಿ ಜಿನುಗುತ್ತಿದ್ದ ಮಳೆಯಲ್ಲಿ ಸಮುದ್ರದ ಪಕ್ಕದಲ್ಲಿ ಹೋಗುತ್ತಿದ್ದ ಆ ಭಯಂಕರ ಮೂರ್ತಿ ಪಿಶಾಚಿಯಂತೆ ಹೋಗುತ್ತಿದ್ದ. ಅವನು ಯಾವುದೋ ಒಂದು ರಹಸ್ಯ ಸ್ಥಳಕ್ಕೆ ಹೋಗುತ್ತಿದ್ದಾನೆ ಎಂಬ ವಿಷಯ ಅವನ ಕೆಲವು ಭಾವಗಳಿಂದ ಸ್ಪಷ್ಟವಾಗಿತ್ತು. ಅವನು ಆಗಾಗ್ಗೆ, ತನ್ನನ್ನು ಯಾರಾ

ಶಂಕರ್. ಅವನ ಕಣ್ಣಿಗೆ ಅಂಧಕಾರವೇ ಕಾಣುತ್ತಿತ್ತು. ಈಗ ಮನಸ್ಸಿನಲ್ಲಿ ಮುಂದಿನ ಹೆಜ್ಜೆಗೆ ಅನುಕೂಲವಾಗುವಂಥ ಒಂದು ಆಶಾಕಿರಣ ಮೂಡಿತು.

ಆ ಪೆಟ್ಟಿಗೆಯನ್ನು ದಡದ ಮೇಲೆ, ಒಬ್ಬ ಅನತಿ ದೂರದಲ್ಲಿದ್ದ ದೋಣಿಯನ್ನು ತಂದ. ಆ ಪೆಟ್ಟಿಗೆಯನ್ನು ದೋಣಿಯಲ್ಲಿಟ್ಟರು. ಇಬ್ಬರೂ ದೋಣಿಯಲ್ಲಿ ಕುಳಿತುಕೊಂಡರು. ದೋಣಿ ಹೊರಟಿತು. ದೋಣಿಯಲ್ಲಿ ಒಂದು ಮಿಣುಕು ದೀಪವಿತ್ತು. ದೋಣಿ ಯಾವ ದಿಕ್ಕಿಗೆ ಹೋಗುತ್ತಿದೆ ಎಂಬುದನ್ನು ಗಮನಿಸಿ ಶಂಕರ್ ಸಮುದ್ರವನ್ನು ಪ್ರವೇಶಿಸಿದ. ದೋಣಿಗೆ ನೇರವಾಗಿ ಈಜ ತೊಡಗಿದ. ಮೂರು ನಾಲ್ಕು ಫರ್ಲಾಂಗ್ ದೂರ ದೋಣಿ ಹೋದಮೇಲೆ ಅವರಿಬ್ಬರೂ ದೋಣಿಯಲ್ಲಿದ್ದ ಪೆಟ್ಟಿಗೆಯನ್ನು ಅತಿ ಪ್ರಯಾಸದಿಂದೆತ್ತಿ ಸಮುದ್ರದೊಳಗೆ ಹಾಕಿದರು. ಮತ್ತೆ ದೋಣಿ ಹಿಂತಿರುಗಿತು.

ದೋಣಿ ದಡದ ಕಡೆ ಹೊರಟುಹೋಯಿತು. ಶಂಕರ್ ಈಜಿಕೊಂಡು ಹೋಗಿ ಆ ಪೆಟ್ಟಿಗೆಯನ್ನು ತಲುಪಿದ. ಸುಮಾರು ಎಂಟು ಅಡಿ ಆಳವಿರುವಲ್ಲಿ ಆ ಪೆಟ್ಟಿಗೆಯನ್ನು ಹಾಕಿದ್ದರು. ಪೆಟ್ಟಿಗೆ ಪಕ್ಕಗಳಲ್ಲಿ ಎರಡು ಕೊಂಡಿಗಳಿದ್ದುವು. ಶಂಕರ್ ತನ್ನ ಸೊಂಟದಲ್ಲಿ ಸಮಯಕ್ಕೆ ಬೇಕಾಗುತ್ತದೆ ಎಂದು ರೇಷ್ಮೆ ಹಗ್ಗವನ್ನಿಟ್ಟಿರುತ್ತಿದ್ದ. ಸೊಂಟದಲ್ಲಿದ್ದ ರೇಷ್ಮೆಯ ಹಗ್ಗವನ್ನು ತೆಗೆದು ಆ ಪೆಟ್ಟಿಗೆಯ ಕೊಂಡಿಗೆ ಕಟ್ಟಿದ. ಅದನ್ನು ಎಳೆದುಕೊಂಡು ದಡದ ಕಡೆಗೆ ನಿಧಾನವಾಗಿ ಈಜತೊಡಗಿದ. ಕೆಲವು ಘಂಟೆಗಳ ಸತತ ಪ್ರಯತ್ನದಿಂದ ಹೆಚ್ಚಿನ ಪ್ರಯಾಸದಿಂದ ಆ ಕುತೂಹಲಕಾರಿ ಉದ್ದವಾದ ಪೆಟ್ಟಿಗೆಯೊಡನೆ ದಡವನ್ನು ಸೇರಿದ. ದಡದಮೇಲಿಟ್ಟಿದ್ದ ಬಟ್ಟೆಯನ್ನು ಹಾಕಿಕೊಂಡು ಆ ಪೆಟ್ಟಿಗೆಯನ್ನು ಹೊತ್ತುಕೊಂಡು ಕೊಂಚ ದೂರ ಬಂದ. ಅವನ ಕಣ್ಣಿಗೆ ಅಲ್ಲೊಂದು ಟ್ಯಾಕ್ಸಿ ಕಂಡಿತು. ಪೆಟ್ಟಿಗೆಯನ್ನು ಟಾಕ್ಸಿಯಲ್ಲಿಟ್ಟು ತಾನೂ ಕುಳಿತುಕೊಂಡ. ಟ್ಯಾಕ್ಸಿ ರಭಸದಿಂದ ರಾಮಚಂದ್‌ನ ಮನೆಯ ಕಡೆ ಹೊರಟಿತು.

"ಟಕ್....ಟಕ್"

"ಯಾರು ?"

"ನಾನು ಶಂಕರ್, ಬಾಗಿಲು ತೆಗೆ."

ರಾಮಚಂದ್ ಬಾಗಿಲು ತೆಗೆದ.

ಟ್ಯಾಕ್ಸಿ ಡ್ರೈವರ್ ಆ ಪೆಟ್ಟಿಗೆಯನ್ನು ಒಳಗೆ ತಂದ. ಬಾಡಿಗೆ ಪಡೆದು ಹೊರಟುಹೋದ.

"ಏನು ಪೆಟ್ಟಿಗೆ ಶಂಕರ್ ?"

"ಅದು ನನಗೂ ಗೊತ್ತಿಲ್ಲ."

"ನೀನೊಂದು ವಿಚಿತ್ರ ವ್ಯಕ್ತಿ. ನಿನ್ನ ಮಾತು ವಿಚಿತ್ರ. ಈ ಪೆಟ್ಟಿಗೆಯನ್ನು ನೀನೇ ಟ್ಯಾಕ್ಸಿಯಲ್ಲಿ ತಂದಿದ್ದೀಯ. ಇದರಲ್ಲೇನಿದೆ ಎಂಬುದು ನಿನಗೆ ತಿಳಿಯದು. ಹಾಗಾದರೆ ರೋಡಿನಲ್ಲಿ ಬಿದ್ದಿದ್ದ ಪೆಟ್ಟಿಗೆಯನ್ನು ಹೊತ್ತುಕೊಂಡು ಬಂದಿದ್ದೀಯಾ ಅನ್ನು."

"ಬಿದ್ದಿದ್ದೇನೋ ಸತ್ಯವೇ ಸರಿ, ಆದರೆ ರೋಡಿನಲ್ಲಿ ಬಿದ್ದಿರಲಿಲ್ಲ. ಸಮುದ್ರದಲ್ಲಿ ಬಿದ್ದಿದ್ದಿತು."

"ಹ್ಞಾ!"

"ಯಾಕಯ್ಯಾ ಅಷ್ಟು ಆಶ್ಚರ್ಯಪಡುತ್ತಿ? ಆ ರೀತಿ ಚೂರು ಚೂರು ಸುದ್ದಿಗಳನ್ನು ಹೇಳಿದರೆ ನಿನಗೇನೂ ಅರ್ಥವಾಗುವುದಿಲ್ಲ. ಕುತೂಹಲ ಹಿಂಗುವ ಬದಲು ಇನ್ನೂ ಹೆಚ್ಚಾಗುತ್ತದೆ. ಆದುದರಿಂದ ನಾನೊಂದು 'ದಂ' ಸಿಗರೇಟು ಸೇದಿ ನಡೆದ ಘಟನೆಯನ್ನು ಅರ್ಥವಾಗುವಂತೆ ವಿವರವಾಗಿ ಹೇಳುತ್ತೇನೆ."

ಶಂಕರ್ ಟವಲಿನಿಂದ ಒದ್ದೆಯಾಗಿದ್ದ ತಲೆಯನ್ನು ಒರಸಿಕೊಂಡು ಹಗ್ಗದ ಮೇಲಿದ್ದ ನೈಟ್ ಡ್ರೆಸ್ಸನ್ನು ಹಾಕಿಕೊಂಡ. ಅವನ ದೇಹ ವಿಪರೀತ ಸುಸ್ತಾಗಿದೆ ಎಂದು ಅವನ ಮುಖಭಾವದಿಂದ ಕಂಡುಬರುತ್ತಿತ್ತು. ಜೇಬಿನಿಂದ ವೈಕ್ರೋಪೋಲೋ ಸಿಗರೇಟನ್ನು ತೆಗೆದ ಹಚ್ಚಿದ. ನಿಧಾನವಾಗಿ ಒಂದು 'ದಂ' ಎಳೆದು ಸೊನ್ನೆ-ಸೊನ್ನೆಯಾಗಿ ಅದರ ದೂಮವನ್ನುಗುಳಿದ.

ರಾಮಚಂದ್ರನ ಕುತೂಹಲಭರಿತವಾದ ನಯನಗಳು ಒಮ್ಮೆ ಶಂಕರನನ್ನೂ ಮತ್ತೊಮ್ಮೆ ಅಲ್ಲಿಯೇ ಇದ್ದ ಉದ್ದವಾದ ಪೆಟ್ಟಿಗೆಯನ್ನೂ ನೋಡುತ್ತಿತ್ತು. ಶಂಕರ್ ಧೂಮಪಾನದಲ್ಲಿ ಸಂಪೂರ್ಣ ಮಗ್ನನಾಗಿದ್ದ. ಶಂಕರ್ ಒಮ್ಮೆ ಕೆಮ್ಮಿ ಗಂಟಲು ಸರಿಮಾಡಿಕೊಂಡ. ರಾಮಚಂದ್ ಮೌನವಾತಾವರಣವನ್ನು ಭಗ್ನಪಡಿಸಿದ.

"ಹೇಳು ಶಂಕರ್, ಹಾಳು ಸಿಗರೇಟನ್ನು ಬಿಸಾಕು."

"ಹುಷಾರ್—ಬೇಕಾದರೆ ನನಗೆ ಏನು ಬೇಕಾದರೂ ಬೈಯಿ ಪರವಾಗಿಲ್ಲ—ಆದರೆ ನನ್ನ ಸ್ಫೂರ್ತಿದಾಯಿನಿ ಪ್ಸೈಕ್ರೋಪೋಲೋವಿಗೆ ಮಾತ್ರ ಮರ್ಯಾದೆ ಕೊಟ್ಟು ಮಾತನಾಡು."

"ನಿನ್ನ ಮಾತಿನಂತೆ ಮುಂದೆ ನಡೆದುಕೊಳ್ಳುತ್ತೇನೆ. ಈಗ ವಿಷಯ ಹೇಳು."

"—ಮನೆಯಿಂದ ಚಂದ್ರಕುಮಾರನ ಜೊತೆಯಲ್ಲಿ ಹೊರಟೆ. ಮಧ್ಯ ದಾರಿಯಲ್ಲಿ ನಾವಿಬ್ಬರೂ ಬೇರೆಬೇರೆಯಾದೆವು. ನನ್ನ ತಲೆಯಲ್ಲಿ ಈ ಮೊಕದ್ದಮೆಯ ಅಲ್ಲೋಲ-ಕಲ್ಲೋಲ ಅವ್ಯವಸ್ಥೆಯು ತುಂಬಿದ್ದಿತು. ಲೀಲಾದೇವಿಯನ್ನು ನಾಳೆಯ ರಾತ್ರಿ ನನ್ನ ಕೈಯಾರ ಮೃತ್ಯುಪಂಜರಕ್ಕೆ ತಳ್ಳಬೇಕು. ಅದಲ್ಲದೆ ಅರುಗೇಂದ್ರನಿಗೆ ಆ ರಾಕ್ಷಸರು ಯಾವ ರೀತಿ ಶಿಕ್ಷೆಗಳನ್ನು ವಿಧಿಸುವರೋ ಎಂಬ ಯೋಚನೆ. ಆ ದಿನ, ಅಂದರೆ ಅರುಗೇಂದ್ರನನ್ನು ಬಂಧಿಸಿದ ದಿನ ಆ ಪಿಶಾಚಿ ಹೇಳಿದ್ದ, ಅವನ ತಲೆಯನ್ನು ಕತ್ತರಿಸಿ ನಿನಗೆ ಪಾರ್ಸಲ್ ಮಾಡುತ್ತೇನೆ ಎಂದು. ಅವರು, ಆ ನೀಚರು ಅಂತಹ ಕಾರ್ಯವನ್ನು ಮಾಡುವುದಕ್ಕೆ ಹೇಸುವುದಿಲ್ಲ ಎಂಬ ವಿಷಯದಲ್ಲಿ ಯಾವ ಸಂಶಯವೂ ಇರಲಿಲ್ಲ ಲೀಲಾದೇವಿಯನ್ನು ನಮ್ಮ ವಶಪಡಿಸಿದರೆ ಅರುಗೇಂದ್ರನನ್ನು ಬಿಟ್ಟುಬಿಡುವುದಾಗಿ ಹೇಳಿದ. ಆದರೆ ಆ ಪಂಚರಂಗಿಯ ಮಾತನ್ನು ಯಾವ ಆಧಾರದ ಮೇಲೆ ನಂಬುವುದು. ಮೊದಲೇ ಪಿಶಾಚಿಗಳು, ಆ ಪಾಪಿಗಳು ಆಡಿದ ಮಾತಿನಂತೆ ನಡೆಯುತ್ತಾರೆಯೋ?—ಅನ್ಯಾಯಪೂರಿತವಾಗಿರುವ ಆ ಭಯಂಕರ ಮೂರ್ತಿಗಳು ಆಡಿದ ಮಾತಿನಂತೆ ನ್ಯಾಯ ಮಾರ್ಗದಲ್ಲಿ ನಡೆಯುತ್ತಾರೆಯೋ?—ಈ ವಿಚಾರಗಳು ನನ್ನ ತಲೆಯನ್ನು ತುಂಬಿದ್ದುವು. ನಾನು ಈ ವಿಷಯಗಳ ತಾಕಲಾಟದಿಂದ, ಮುಂದಿನ ಹೆಜ್ಜೆಗೆ ದಾರಿಯಿಲ್ಲದೆ, ನಾನು ಸೋಲುತ್ತೇನೇನೋ ಎಂಬ ನಿರಾಶಾಭಾವದಿಂದ, ಹುಚ್ಚನಂತೆ ಬೊಂಬಾಯಿನ ಮೊಹಲ್ಲಾಗಳನ್ನು ಸುತ್ತುತ್ತಿದ್ದೆ. ರಾತ್ರಿ ಬಹಳ ಹೊತ್ತಾಯಿತು. ಆದರೂ ನನ್ನ ಮನಸ್ಸು ಮನೆಯ ಕಡೆ ತಿರುಗಲಿಲ್ಲ ಭಾರವಾದ ಮನಸ್ಸಿಗೆ ಬೇಸರವಾದ ಹೃದಯಕ್ಕೆ ತಂಗಾಳಿಯೇ ಔಷಧವೆಂದು ಚೌಪಾತಿಯ ಕಡೆ ಹೋದೆ. ಆ ಘೋರ ರಾತ್ರಿಯಲ್ಲಿ ಜನಸಂಚಣಿಯಿಂದ ಅತಿ ದೂರದಲ್ಲಿ ಒಬ್ಬ ಭಯಂಕರ ವ್ಯಕ್ತಿ ಹೋಗುತ್ತಿದ್ದ. ನನ್ನ ಮನಸ್ಸು ಅವನ ವಿಷಯದಲ್ಲಿ ಸಂಶಯದ ಬೀಜವನ್ನು ಬಿತ್ತಿತು.

ನಾನು ನನ್ನ ಮನಸ್ಸಿನ ಕೂಗಿನಂತೆ ಅವನನ್ನು ಹಿಂಬಾಲಿಸತೊಡಗಿದೆ. ಅವನು ತನ್ನನ್ನು ಯಾರಾದರೂ ಹಿಂಬಾಲಿಸುತ್ತಿದ್ದಾರೆಯೋ ಎಂದು ಆಗಾಗ್ಗೆ ತಿರುಗಿ ನೋಡಿಕೊಂಡು ಹೋಗುತ್ತಿದ್ದ. ನಾನು ಅತ್ಯಂತ ಎಚ್ಚರಿಕೆಯಿಂದ ಅವನ ಕಣ್ಣು ತಪ್ಪಿಸಿ ಬಹಳ ಜಾಗರೂಕನಾಗಿ ಅವನನ್ನು ಹಿಂಬಾಲಿಸಿದೆ.

"ಅವನು ಎಷ್ಟೇ ಎಚ್ಚರಿಕೆಯಿಂದ ನಡೆದರೂ ನಾನು ಹಿಂಬಾಲಿಸುತ್ತಿದ್ದೇನೆ ಎಂಬುದು ಅವನಿಗೆ ಗೋಚರಿಸಲಿಲ್ಲ. ಬಹಳ ದೂರ ಹೋದಮೇಲೆ ಸಮುದ್ರದ ದಡದಿಂದ ಮೂರುನಾಲ್ಕು ಫರ್ಲಾಂಗ್ ದೂರದಲ್ಲಿ ಒಂದು ಗುಡಿಸಲು ಕಣ್ಣಿಗೆ ಬಿತ್ತು. ಆ ಗುಡಿಸಿಲಿನಲ್ಲಿ ಒಂದು ಮಿಣುಕು ದೀಪ ಉರಿಯುತ್ತಿತ್ತು. ಆ ಭಯಂಕರ ಮೂರ್ತಿ ಆ ಗುಡಿಸಲನ್ನು ಪ್ರವೇಶಿಸಿದ. ನಾನು ಅವನನ್ನು ಹಿಂಬಾಲಿಸಬೇಕೆಂದಿದ್ದೆ. ಗಟ್ಟಿ ಮನಸ್ಸು ಮಾಡಿ ಗುಡಿಸಲ ಕಡೆ ಹೆಜ್ಜೆ ಹಾಕತೊಡಗಿದೆ.

"ಅಷ್ಟರಲ್ಲಿ ಆ ಗುಡಿಸಲಿನಿಂದ ಯಾರೋ ಮಾತನಾಡಿಕೊಂಡು ಬರುವ ಧ್ವನಿ ಕೇಳಿಸಿತು. ನಾನು ತಕ್ಷಣ ಅಲ್ಲಿಯೇ ಇದ್ದ ಒಂದು ನೋಡುಬಂಡೆಯ ಮರೆಯಲ್ಲಿ ಕುಳಿತುಕೊಂಡೆ. ಬಂದಂಥ ವ್ಯಕ್ತಿಗಳು ಕೈಯಲ್ಲಿ ಒಂದು ಉದ್ದವಾದ ಪೆಟ್ಟಿಗೆ ಹಿಂದರೆ ನಿನ್ನ ಕುತೂಹಲವನ್ನು ಕೆದಕುತ್ತಿರುವ ಈ ಪೆಟ್ಟಿಗೆಯನ್ನು ಹೊತ್ತು ತಂದು ಅಲ್ಲಿಯೇ ಇದ್ದ ಒಂದು ದೋಣಿಯಲ್ಲಿಟ್ಟುಕೊಂಡು ಸಮುದ್ರದ ದಡದಿಂದ ದೋಣಿಯಲ್ಲಿ ಆರು ಅಡಿ ಆಳವಿರುವ ಸ್ಥಳವನ್ನು ಪ್ರವೇಶಿಸಿ ಅಲ್ಲಿ ಈ ಪೆಟ್ಟಿಗೆಯನ್ನು ಎತ್ತಿ ಹಾಕಿದರು. ನಾನು ಈಜಿಕೊಂಡು ಹೋಗಿ ಬಹಳ ಪ್ರಯಾಸದಿಂದ ಈ ಪೆಟ್ಟಿಗೆಯನ್ನು ತಂದಿದ್ದೇನೆ. ಈ ಪೆಟ್ಟಿಗೆಯಲ್ಲೇನಿದೆ ಎಂಬುದು ನನಗೆ ತಿಳಿಯದು."

ಇಬ್ಬರೂ ಸೇರಿ ಆ ಪೆಟ್ಟಿಗೆಯನ್ನೊಡೆದರು.

ತಕ್ಷಣ ಒಂದು ಹೆಜ್ಜೆ ಹಿಂದಕ್ಕೆ ಸರಿದರು.

ಆ ಪೆಟ್ಟಿಗೆಯಲ್ಲಿ ಅಂಥ ಭಯಂಕರ ವಸ್ತುವೊಂದು ಅವರ ಕಣ್ಣಿಗೆ ಬಿತ್ತು. ಎದೆ ಝಲ್ಲೆನಿಸುವಂಥ ಆ ವಸ್ತು ಅವರುಗಳಿಗೆ ಅತ್ಯಂತ ಆಶ್ಚರ್ಯವನ್ನುಂಟು ಮಾಡಿತು.

೭

ಈ ವಜ್ರದ ಮೊಕದ್ದಮೆಗಳಲ್ಲಿ ಬಹಳ ರಹಸ್ಯ ಅಡಗಿರುತ್ತಿತ್ತು. ಗೋವಾ ದಲ್ಲಿ ಕಳುವಾದ ಆ ಮೂರು ವಜ್ರಗಳ ರಹಸ್ಯವನ್ನು ಶಂಕರ್ *ವಿಲಿಯಂ ನೊಡನೆ ಕಂಡುಹಿಡಿಯಲು ಹೋದಾಗ, ಇದೇ ರೀತಿ ಆಶ್ಚರ್ಯಕಾರಿ ಘಟನೆ ಗಳನ್ನು ಎದುರಿಸಿದ್ದ.

"ಜೈಪ್ರಕಾಶ್" ಮಹೋನ್ನತ ಅನರ್ಘ್ಯ ವಜ್ರವೇನೋ ಸರಿ, ಆದರೆ ಅದು ಮೃತ್ಯುವಜ್ರ, ಅದು ಯಾರ ಕೈನಲ್ಲಿ ಸೇರುತ್ತದೆಯೋ ಆ ವ್ಯಕ್ತಿ ಅನೇಕ ಅಪಾಯಗಳಿಗೆ ಒಳಗಾಗುತ್ತಿದ್ದ. ಮೋಹನ್‌ಚಂದ್ ಶ್ರೀನಗರದಿಂದ ಆ ವಜ್ರ ವನ್ನು ತರುತ್ತಿದ್ದ. ದಾರಿಯಲ್ಲಿ ಜನತಾ ಎಕ್ಸ್‌ಪ್ರೆಸ್ಸಿನಲ್ಲಿ ಆ ವಜ್ರದ ಅಪಹರಣ ಕೆನ್ನೋಸ್ಕರ ಅವನ ಕೊಲೆಯನ್ನು ನಡೆಸಿದರು. ಅಲ್ಲಿ ಬೊಂಬಾಯಿನ ಡಕಾ ಯಿತಿ ಗುಂಪಿನವರು ಮೋಹನ್‌ಚಂದ್‌ನನ್ನು ಕೊಂದು ಆ ವಜ್ರವನ್ನು ಅಪಹರಿ ಸಿದರು. ಆ ಡಕಾಯಿತಿ ಗುಂಪಿನ ನಾಯಕನಿಗೆ ಆ ವಜ್ರದ ವಿಲೇವಾರಿಯ ಯೋಚನೆ ಹತ್ತಿತು. ಕದ್ದ ಮಾಲುಗಳನ್ನು ದೇಶದಿಂದ ದೇಶಕ್ಕೆ ಹಾಕೊಂಡು ಹೋಗಿ ಅಲ್ಲಿ ಅವಕ್ಕೆ ಗಿರಾಕಿಗಳನ್ನು ಗೊತ್ತು ಮಾಡುವ ಏಜೆಂಟ್ ಬೊಂಬಾಯಿ ನಲ್ಲಿದ್ದ. ಅವನ ಸರಿಯಾದ ಹೆಸರು ಕುಲಗೋತ್ರಗಳು ಯಾರಿಗೂ ತಿಳಿದಿರಲಿಲ್ಲ. ಅವನನ್ನು ಎಲ್ಲರೂ ಬೊಂಬಾಯಿವಾಲ ಎನ್ನುತ್ತಿದ್ದರು. ಅವನು ಪೋಲೀಸರ ದೃಷ್ಟಿಯ ಮರೆಯಲ್ಲಿದ್ದ ವ್ಯಕ್ತಿ. ಅವನಿಗೆ ಎರಡು ಮೂರು ಬಾರಿ ಜೈಲಾ ಗಿತ್ತು. ಪ್ರತಿ ಕಳ್ಳ ಮಾಲಿನ ಮಾರಾಟದ ಮೊಕದ್ದಮೆಯಲ್ಲೂ ಬೊಂಬಾಯಿ ವಾಲಾನ ಕೈವಾಡವಿರುತ್ತಿತ್ತು. ಮೊನ್ನೆ ಮೊನ್ನೆ ನಡೆದ ಒಂದು ಚಿನ್ನದ ಹಾರದ

---

*ಗೋವಾ ವಜ್ರದ ಕಳುವಿನ ರಹಸ್ಯವನ್ನು ಭೇದಿಸಿದ ರೋಮಾಂಚ ಕಾದಂಬರಿ ಮಾ ಭಿ ಶೇಷಗಿರಿರಾವ್‌ರವರ "ಮೃತ್ಯುಪಂಜರ"

ದರೋಡೆಯಲ್ಲಿ ಬೊಂಬಾಯಿವಾಲನ ಪಾತ್ರವಿದೆಯೆಂಬುದು ಅಧಿಕೃತವಾಗಿ ಪೋಲೀಸರಿಗೆ ತಿಳಿದುಬಂದಿತ್ತು. ಅವನನ್ನು ಹಿಡಿಯಲು ಪೋಲೀಸರು ಸತತ ಪ್ರಯತ್ನ ಮಾಡುತ್ತಿದ್ದರು. ಅವನನ್ನು ಮೈಸೂರು ಸಂಸ್ಥಾನದಲ್ಲೆಲ್ಲಾದರೂ ಕಂಡುಬಂದರೆ ಹಿಡಿದು ಬೊಂಬಾಯಿ ಸರ್ಕಾರಕ್ಕೆ ಒಪ್ಪಿಸಬೇಕೆಂದು, ಆ ಕಾರ್ಯದಲ್ಲಿ ಜಯಶೀಲರಾದರೆ ಸೂಕ್ತ ಬಹುಮಾನವನ್ನೂ ಕೊಡುವುದಾಗಿ ಬೊಂಬಾಯಿ ಸರ್ಕಾರ ಮೈಸೂರು ಪೋಲೀಸ್ ಇಲಾಖೆ, ಹಾಗೂ ಪತ್ತೇದಾರ್ ಶಂಕರ್ ಮತ್ತು ವಿಲಿಯಂರವರಿಗೆ ಕಾಗದ ಬರೆದಿದ್ದರು.

ಜನತಾ ಎಕ್ಸ್‌ಪ್ರೆಸ್ಸಿನಲ್ಲಿ ಮೋಹನ್‌ಚಂದ್‌ರ ಕೊಲೆ ಮಾಡಿ ಆ ವಜ್ರವನ್ನು ಅಪಹರಿಸಿದ ಭಯಂಕರ ವ್ಯಕ್ತಿಗೆ, ಈ ವಜ್ರದ ವಿಲೇವಾರಿಯ ಬಗ್ಗೆ ಬಹಳ ಯೋಚನೆ ಹತ್ತಿಕೊಂಡಿತು.

ದಗಾಬಾಜಿಯಲ್ಲಿ ಎತ್ತಿದ ಕೈ ಎನಿಸಿದ ಬೊಂಬಾಯಿವಾಲನಿಗೆ, ಶ್ರೀನಗರದ ಶ್ರೀಮಂತ ಮೋಹನ್‌ಚಂದ್‌ರಿಗೆ ವಜ್ರವನ್ನು ಮಾರಿದ ವಿಷಯ ತಿಳಿಯಿತು ಆ ವಜ್ರದೊಡನೆ ಮೋಹನ್‌ಚಂದ್ "ಆಕಾಶದೂತ" ವಿಮಾನದಲ್ಲಿ ಬೊಂಬಾಯಿಗೆ ಬರುತ್ತಿರುವ ವಿಷಯವೂ ತಿಳಿಯಿತು. ಈ ಕೆಳಕಂಡ ಪತ್ರ ಬಂದಿತು.

"ಜೈಪ್ರಕಾಶ್"—'ಆಕಾಶದೂತ' ವಿಮಾನದಲ್ಲಿ ಶ್ರೀನಗರದಿಂದ ಬೊಂಬಾಯಿಗೆ ಬರುತ್ತಿದೆ. ಅದನ್ನು ನಾವು ಕೊಂಡುಕೊಳ್ಳಲು ಸಿದ್ಧರಾಗಿದ್ದೇನೆ. "ಜೈಪ್ರಕಾಶ್" ನಿನ್ನ ಹತ್ತಿರ ಬಂದ ತಕ್ಷಣ ಭಾರತದಲ್ಲಿರುವ ಯಾವುದಾದರು ಗುಪ್ತ ಪಾಕಿಸ್ತಾನ್ ಶಾಖೆಗೆ ಹೋಗಿ ಅವರೊಡನೆ ಮಾತನಾಡುವುದು. ನೀನು ನಮ್ಮ ಗುಪ್ತದಳದವರೊಡನೆ ಬಹಳ ಎಚ್ಚರಿಕೆಯಿಂದ ವ್ಯವಹಾರ ನಡೆಸುವುದು. ಪಾಕೀಸ್ಥಾನದ ಗುಪ್ತಚಾರರನ್ನು ಹಿಡಿದು ಹಾಕಲು ಭಾರತ ಸರ್ಕಾರ "ದಿ ಸ್ಪೆಶಲ್ ಸಿ. ಐ ಡಿ" ಇಲಾಖೆ ಅತ್ಯಂತ ಜಾಗರೂಕತೆಯಿಂದ, ತೆರೆದ ಕಣ್ಣಿನಿಂದ ಕೆಲಸ ಮಾಡುತ್ತಿದೆ—ಭಾರತದ ಪ್ರೈವೇಟ್ ಡಿಟೆಕ್ಟಿವ್ ಶಂಕರ್, ಬಿ.ಎ.,ಎಲ್.ಎಲ್.ಬಿ.ಯವರಿಗೆ—ಬೊಂಬಾಯಿವಾಲ ಎಂಬ ಹೆಸರಿನ ಚೋರ ಪಾಕಿಸ್ತಾನದ ಪ್ರಮುಖ ಗೂಢಚಾರ, ಭಾರತದ ಅಮೂಲ್ಯ ವಜ್ರಗಳನ್ನು ಭಾರತದಿಂದ ಪಾಕೀಸ್ತಾನಕ್ಕೆ ಸಾಗಿಸುತ್ತಿದ್ದಾರೆ ಎಂಬ ವಿಷಯ ಸೂಕ್ಷ್ಮವಾಗಿ ತಿಳಿದಿದೆ ಎಂದು ನಮ್ಮ ಗೂಢ

ಚಾರರು ನನಗೆ ತಿಳಿಸಿದ್ದಾರೆ. ಅದು ಅಲ್ಲದೆ ಭಾರತದ ಗೂಢಚಾರರು, ಪಾಕಿಸ್ಥಾನದಲ್ಲಿ ಭಾರತದ ಅನೇಕ ಅಮೂಲ್ಯ ವಜ್ರಗಳಿವೆ ಎಂದು ಇನ್ನು ಅನೇಕ ಅಮೂಲ್ಯ ವಜ್ರಗಳ ದರೋಡೆ ಸನ್ನಾಹ ನಡೆಯಲಿದೆ ಎಂದು ಪತ್ತೇದಾರ್ ವಿಲಿಯಂ ಫಾಸ್ಟನಿಗೆ ಒಂದು ಗುಪ್ತ ಪತ್ರವನ್ನು ಬರೆದಿರುವರೆಂದು ಅಧಿಕೃತ ವಲಯಗಳಿಂದ ನನಗೆ ತಿಳಿದು ಬಂದಿದೆ. ವಿಲಿಯಂ ಮತ್ತು ಶಂಕರ್ ಇಬ್ಬರೂ ಪ್ರಾಣ ಸ್ನೇಹಿತರಾದ್ದರಿಂದ ಶಂಕರ್‌ಗೆ ಗೊತ್ತಿರುವ ವಿಷಯಗಳು ವಿಲಿಯಂನಿಗೂ, ವಿಲಿಯಂಗೆ ತಿಳಿದಿರುವ ವಿಷಯಗಳು ಶಂಕರ್‌ಗೂ ತಿಳಿದಿರುತ್ತದೆ. "ಜೈಪ್ರಕಾಶ್" ವಜ್ರದ ದರೋಡೆಯ ಮೊಕದ್ದಮೆಯನ್ನು ಹಿಡಿದಿರುವವನು ಪತ್ತೇದಾರ್ ಶಂಕರ್ ಎಂಬುದು ನಿನಗೆ ನೆನಪಿರಲಿ. ಶಂಕರ್ ಯುಕ್ತಿಶಾಲಿ, ಧೈರ್ಯಶಾಲಿ. ಅವನ ತಬ್ಬನಾ ಸದಸಳಿಗೆ ಸೋಲಿನ ಪರಿಚಯವಿಲ್ಲವೆಂಬುದನ್ನು ನೆನಪಿನಲ್ಲಿಟ್ಟುಕೊ. ಸಾಧ್ಯವಾದರೆ ಅಪಾಯಕಾರಿ ಪತ್ತೇದಾರರುಗಳಾದ ಶಂಕರ್, ಅಮರೇಂದ್ರ, ವಿಲಿಯಂ ಮತ್ತು ಜರ್ನಲಿಸ್ಟ್ ಶೇಷಗಿರಿ ನಾಲ್ವರನ್ನೂ ಕತ್ತರಿಸಿಹಾಕಿಬಿಡು.

"ಆ ನಾಲ್ವರನ್ನು ಕೊಲೆ ಮಾಡಿ ಅವರ ರುಂಡಗಳನ್ನು ನಮ್ಮ ಸಂ. 28ಗೆ ತೋರಿಸಿದರೆ, ಸಂ. 28 ನಿನಗೆ ನಾಲ್ಕು ಸಾವಿರ ರೂಪಾಯಿಗಳನ್ನು ಕೊಡುತ್ತಾನೆ. ಒಂದುಗೆ ತಲೆ ಒಂದು ಸಾವಿರ ರೂಪಾಯಿ ಕೊಡುವುದಲ್ಲದೆ, ಅವರನ್ನು ಕೊಲ್ಲುವುದಕ್ಕೆ ನಿನಗಾಗುವ ಖರ್ಚನ್ನು ಸಹ ಕೊಡುತ್ತೇವೆ

"ಗೆಳೆಯ ಬೊಂಬಾಯಿವಾಲ, ನೀನು ಭಾರತದ ಅನೇಕ ಅಮೂಲ್ಯ ವಜ್ರಗಳನ್ನು ಕಳುಹಿಸುತ್ತೀಯೆಂದು ನಂಬಿದ್ದೇನೆ. ಅಕಸ್ಮಾತ್ ಇಂದಲ್ಲ ನಾಳೆ ಎಂದಾದರೂ ಒಂದು ದಿನ ಭಾರತದ ಪೋಲೀಸರ ಕೈಗೆ ಸಿಕ್ಕಿಹಾಕಿಕೊಂಡರೆ, ಅವರು ಎಂಥ ಭಯಂಕರ ಶಿಕ್ಷೆಯನ್ನು ಕೊಟ್ಟರೂ ನೀನು ನಾನು ಪಾಕೀಸ್ತಾನದ ಗುಪ್ತಚಾರ ಎಂಬುದನ್ನು ಹೇಳುವುದಿಲ್ಲವೆಂದು ನಾನು ನಂಬುತ್ತೇನೆ. ಭಾರತದ ಅನೇಕ ಅಮೂಲ್ಯ ವಜ್ರಗಳು ನಿನ್ನ ಅಮೋಘ ಪ್ರಯಾಸಪೂರ್ಣ ಪ್ರಯತ್ನದಿಂದ ಪಾಕೀಸ್ತಾನವನ್ನು ಸೇರಿವೆ. ಅದಕ್ಕೆ ನಾನು ನಿನಗೆ ಚಿರ ಋಣಿ. ಕಾಶ್ಮೀರದಲ್ಲಿ ನಾನೊಂದು ಸಲ "ಜೈಪ್ರಕಾಶ್" ಎಂಬ ಹೆಸರಿನ ಮಹೋನ್ನತ ಅತ್ಯಂತ ಬೆಲೆ ಬಾಳುವ ವಜ್ರವನ್ನು ನೋಡಿದೆ. ಆಗಲೇ ನನಗೆ ಅದರ ಮೇಲೆ ಮನಸ್ಸಾಯಿತು. ಅದು ಎರಡು ಮೂರು ಬಾರಿ ದರೋಡೆ

ಯಾದ ಸುದ್ದಿಯೂ ನನಗೆ ತಿಳಿದು ಬಂದಿತು. ಅದಕ್ಕಾಗಿ ನಡೆದ ಸಾಲು ಸಾಲು ಕೊಲೆಗಳ ವಿಷಯವೂ ನನಗೆ ತಿಳಿದುಬಂದಿತು. ಆ ವಜ್ರ ಶ್ರೀನಗರದ ಸುಪ್ರಸಿದ್ಧ ಶ್ರೀಮಂತರೊಬ್ಬರಿಂದ ಮೋಹನಚಂದ್‌ಗೆ ಮಾರಾಟವಾದ ವಿಷಯವೂ ನನಗೆ ತಿಳಿಯಿತು. ಮೋಹನಚಂದ್ ಶ್ರೀನಗರದಿಂದ "ಜೈಪ್ರಕಾಶ್" ವಜ್ರದೊಡನೆ "ಆಕಾಶದೂತ' ವಿಮಾನದಲ್ಲಿ ಬೊಂಬಾಯಿಗೆ ಬಂದು, ಬೊಂಬಾಯಿಯಿಂದ ಜನತಾ ಎಕ್ಸ್‌ಪ್ರೆಸ್ಸಿನಲ್ಲಿ ಹೋಗುತ್ತಿದ್ದಾಗ ಸಿನಿಮಾ ನಟಿ ಲೀಲಾದೇವಿ ಅವನ ಕೊಲೆಯನ್ನು ಮಾಡಿದ್ದಾಳೆ. ಈ ಕೊಲೆಯ ಉದ್ದೇಶ್ಯ ನೋಡು ಅಥವಾ, ಲೀಲಾದೇವಿಯ ಸೌಂದರ್ಯಕ್ಕೆ ಬೆರಗಾಗಿ ಮೋಹನಚಂದ್ ಅವಳನ್ನು ಕೆಡಿಸಲು ಹೋದಾಗ ಅವಳು ತನ್ನ ಮಾನವನ್ನು ಉಳಿಸಿಕೊಳ್ಳಲು ಮೋಹನಚಂದ್‌ನನ್ನು ಕೊಂದಿರಬಹುದು. ಆತುರದಲ್ಲಿ ಲೀಲಾದೇವಿ ವ್ಯಾನಿಟಿ ಬ್ಯಾಗನ್ನು ಕೆಳಡ ಮೇಜಿಯೇ ಹಾಕಿದ್ದರಿಂದ ಅವಳೇ ಕೊಲೆಪಾತಕಿಯೆಂಬ ವಿಷಯದಲ್ಲಿ ಯಾವ ಸಂಶಯವೂ ಇಲ್ಲ ಎಂದು ಭಾರತದ ಪೋಲೀಸರು ಹೇಳಿದರು. ಆದರೆ ಸಿನಿಮಾ ನಟಿಗೂ ಮೋಹನಚಂದ್‌ನಿಗೂ ಯಾವ ಸಂಬಂಧವೂ ಇಲ್ಲ. ಲೀಲಾದೇವಿ ನಿರಪರಾಧಿನಿ. ಅಕಸ್ಮಾತ್ ದರೋಡೆಗಾರರ ಕಣ್ಣಿಗೆ ಬಿದ್ದಿದ್ದಾಳೆ. ಆ ದರೋಡೆಗಾರರು ಆ ಮುಗ್ಧೆಯ ಮೇಲೆ ಅಪವಾದವನ್ನು ಹೊರಿಸಿ, ಅವಳನ್ನು ಅನುಭವಿಸಲು ಪ್ಲಾನು ಹಾಕಿದ್ದಾರೆ. ಮೋಹನ ಚಂದ್‌ರ ಕೊಲೆಗೆ ಆ ಅತ್ಯಮೂಲ್ಯ "ಜೈಪ್ರಕಾಶ್" ವಜ್ರವೇ ಕಾರಣ ಎಂಬುದು ನನಗೆ ತಿಳಿದಿದೆ. ಅಂತೆಯೇ ಪತ್ತೇದಾರ್ ಶಂಕರ್‌ನಿಗೂ ತಿಳಿದಿದೆ. ಆದರೆ ಪೋಲಿಸಿನವರು ಏನೂ ಅರಿಯದ ಮುಗ್ಧೆ ಲೀಲಾದೇವಿಯೇ ಕೊಲೆಪಾತಕಿ. ಅವಳನ್ನು ಹುಡುಕಿ ಕೊಟ್ಟವರಿಗೆ ಐದು ಸಾವಿರ ರೂಪಾಯಿ ಬಹುಮಾನ ಎಂದು ಭಾರತದಲ್ಲೆಲ್ಲಾ ಭಿತ್ತಿ ಪತ್ರಗಳನ್ನು ಹಚ್ಚಿರುವುದು ಹಾಸ್ಯಾಸ್ಪದ. ಕೆಲವು ದಿನಗಳಲ್ಲೇ ಪೋಲೀಸರಿಗೆ ಕಾಣೆಯಾದ ಮೂಲ "ಜೈಪ್ರಕಾಶ್" ಎಂಬ ವಜ್ರ. ಅವರಲ್ಲಿ ಪಾಕೀಸ್ತಾನದ ಕೈವಾಡವಿದೆ ಎಂದು ಶಂಕರ್ ಹೇಳಬಹುದು. ಅಷ್ಟರಲ್ಲಿ ನೀನು ಶಂಕರ್‌ನ ಕೊಲೆಯ ಏರ್ಪಾಡು ಮಾಡು. ನಾವು ಮಾಡಬೇಕೆಂದಿರುವ ಅನೇಕ ಅತ್ಯಮೂಲ್ಯ ಮುಂದಿನ ದರೋಡೆಗಳಿಗೆ ಪತ್ತೇದಾರ್ ಶಂಕರ್ ಕಂಟಕಪ್ರಾಯನಾಗಿದ್ದಾನೆ. ಅವನು ನಮ್ಮ ಮಾಂಸದಲ್ಲಿರುವ

ಮುಳ್ಳು. ಆ ಮುಳ್ಳು ತೆಯುವವರೆಗೂ ನಾವು ಆ ಮಾಂಸವನ್ನು ತಿನ್ನಲಾಗು ವುದಿಲ್ಲ.

"ಪತ್ತೇದಾರ್ ವಿಲಿಯಂ, ಜರ್ನಲಿಸ್ಟ್ ಶೇಷಗಿರಿ ಇವರಿಬ್ಬರನ್ನು ಆಮೇಲೆ ಕೊಂದರೂ ಪರವಾಗಿಲ್ಲ. ಮೊದಲು ಶಂಕರ್ ಮತ್ತು ಅರುಗೇಂದ್ರ ವಿಜಯ ಇಬ್ಬರನ್ನು ಕೊಂದುಬಿಡು. ಶಂಕರ್ ತನಗೆ ತಿಳಿದಿರುವಂಥ ಅನೇಕ ವಿಷಯಗಳನ್ನು ಪೋಲೀಸರಿಗಾಗಲಿ, ಪತ್ತೇದಾರ್ ವಿಲಿಯಂ ಥಾಮ್ಸನಿಗಾಗಲಿ ತಿಳಿಸುವಲ್ಲಿ ಶಂಕರ್‌ನ ಕೊಲೆಯಾಗಬೇಕು ಆದಷ್ಟು ಬೇಗ ಈ ಕಾರ್ಯ ಗಳನ್ನು ಜಾಗರೂಕತೆಯಿಂದ ಮಾಡುತ್ತೀಯೆಂದು ನಂಬಿದ್ದೇನೆ. ಎಚ್ಚರಿಕೆ.

ಇತಿ,

ನಾನು,

ಕರಾಚಿ, ಪಾಕೀಸ್ತಾನ್"

ಇದು ಕರಾಚಿಯಿಂದ ಡಾಕು ಬೊಂಬಾಯಿವಾಲನಿಗೆ ಬಂದ ಪತ್ರ.

ಬೊಂಬಾಯಿವಾಲ ಕರಾಚಿಯಿಂದ ಬಂದ ಪತ್ರವನ್ನು ಓದಿಕೊಂಡು ಸಕಲ ವಿಷಯವನ್ನೂ ಅರ್ಥ ಮಾಡಿಕೊಂಡ. ಯಾವುದಾದರು ರೀತಿಯಲ್ಲಿ "ಜೈಪ್ರಕಾಶ್" ವಜ್ರವನ್ನು ಹಾಜರಿ ಮಾಡಿಕೊಂಡು ಪಾಕೀಸ್ಥಾನಕ್ಕೆ ಸಾಗಿಸ ಬೇಕೆಂದು ನಿರ್ಧರ ಮಾಡಿಕೊಂಡ. ಮೊದಲು ಬೊಂಬಾಯಿವಾಲ ಕಂಡು ಹಿಡಿಯಬೇಕಾದ ವಿಷಯವೆಂದರೆ ಯಾರು ಜನತಾ ಎಕ್ಸ್‌ಪ್ರೆಸ್ಸಿನಲ್ಲಿ ಮೋಹರ್ ಚಂದ್‌ನನ್ನು ಕೊಲೆ ಮಾಡಿ ಆ ವಜ್ರವನ್ನು ಅಪಹರಿಸಿದರು ಎಂಬುದು.

ಇತ್ತಕಡೆ ವಜ್ರವನ್ನು ಅಪಹರಿಸಿದ ವ್ಯಕ್ತಿ ಆ ವಜ್ರವನ್ನು ಮಾರಲು ಸರಿ ಯಾದ ಏಜೆಂಟನ್ನು ಹುಡುಕುತ್ತಿದ್ದ ಸರಿಯಾದ ಏಜೆಂಟೆಂದರೆ ಬೊಂಬಾಯಿ ವಾಲನೇ. ಬೊಂಬಾಯಿವಾಲ ದರೋಡೆಗಾರನನ್ನು ಹುಡುಕುತ್ತಿದ್ದ. ದರೋಡೆ ಗಾರ ಬೊಂಬಾಯಿವಾಲನನ್ನು ಹುಡುಕುತ್ತಿದ್ದ.

ಒಬ್ಬರಿಗಿಂತ ಒಬ್ಬರು ಪಕ್ಕಾ ಪಂಚರಂಗಿಗಳು.

ಒಬ್ಬರಿಗೊಬ್ಬರಿಗೆ ಪರಿಚಯವಾಯಿತು. ಆಗ ವಜ್ರವನ್ನು ಅಪಹರಿಸಿದ ಡಕಾಯಿತಿ ಬೊಂಬಾಯಿವಾಲನಿಗೆ ಈ ರೀತಿಯಾಗಿ ಪತ್ರ ಬರೆದ.

"ಬೊಂಬಾಯಿವಾಲರವರಿಗೆ,

"ನಾನು ಜನತಾ ಎಕ್ಸ್‌ಪ್ರೆಸ್‌ನಲ್ಲಿ ಮೋಹರ್‌ಚಂದ್‌ನನ್ನು ಕೊಲೆ ಮಾಡಿ,

ಜೈಪ್ರಕಾಶ್ ಎಂಬ ಹೆಸರಿನ ಅತ್ಯಮೂಲ್ಯ ವಜ್ರವನ್ನು ದರೋಡೆ ಮಾಡಿದೆ. ಆ ವಜ್ರವನ್ನಿಟ್ಟುಕೊಂಡಿರುವುದರಿಂದ ನನಗೆ ಯಾವ ಪ್ರಯೋಜನವೂ ಇಲ್ಲ. ನನಗೆ ಬೇಕಾಗಿರುವುದು ಹಣ. ನಾನು ಆ ವಜ್ರವನ್ನು ಮಾರಾಟ ಮಾಡಲು ಯಾವ ತೊಂದರೆಯನ್ನೂ ತೆಗೆದುಕೊಳ್ಳುವ ಸ್ಥಿತಿಯಲ್ಲಿಲ್ಲ. ಆ ವಜ್ರಕ್ಕೆ ಪಾಕೀಸ್ತಾನದಲ್ಲಿ ಅತ್ಯಂತ ಬೆಲೆ ಇದೆ ಎಂಬ ವಿಷಯ ನನಗೆ ತಿಳಿದಿದೆ. ನೀನು ಮನಸ್ಸು ಮಾಡಿದರೆ ಅದನ್ನು ಪಾಕೀಸ್ತಾನದಲ್ಲಿ ಮಾರಬಹುದು. ಅದರಿಂದ ನಿನಗೆ ವಿಪರೀತ ಲಾಭವಿದೆ. ನೀನು ಆ ವಜ್ರವನ್ನು ಭಾರತದ ಬೆಲೆಯ ಮೇಲೆ ನಿನಗೆ 25 ಪರ್ಸೆಂಟ್ ಡಿಸ್ಕೌಂಟ್ ಕೊಡುತ್ತೇನೆ. ಅಂದರ ಭಾರತದ ಬೆಲೆಯ ಮುಕ್ಕಾಲು ಭಾಗದ ಬೆಲೆಗೆ ನಾನು ಮಾರುತ್ತೇನೆ. ನಿನಗೆ ಈ ವ್ಯವಹಾರವನ್ನು ನಡೆಸಿಕೊಳ್ಳಲು ಇಷ್ಟವಿದ್ದರೆ ಕೆಂಪು ರೋಜಾಹೂವನ್ನು ಹಿಡಿದುಕೊಂಡು ಗೇಟ್‌ವೇ ಆಫ್ ಇಂಡಿಯಾ ಬಳಿ ನಿಂತಿರು. ಅಲ್ಲಿಗೊಂದು ಕರಿಯ ಕಾರು ಬಂದು ನಿನ್ನನ್ನು ನನ್ನ ಬಳಿಗೆ ಕರೆದುಕೊಂಡು ಬರುತ್ತದೆ. ನಮಗೆ ತೊಂದರೆ ಕೊಡಲು ಯಾವುದಾದರೂ ವಿಧದಲ್ಲಿ ಪ್ರಯತ್ನಿಸಿದರೆ ನಿನ್ನ ರುಂಡ ಮುಂಡದಿಂದ ಬೇರೆಯಾಗುತ್ತದೆ. ಎಚ್ಚರಿಕೆ. ಮತ್ತೊಂದು ಮಾತು ನೆನಪಿರಲಿ, ನಿಮ್ಮನ್ನು ಹಿಡಿಯಲು ಹೊರಟ ಶಂಕರ್‌ನ ಸ್ನೇಹಿತ ಅರುಗೇಂದ್ರನನ್ನು ನಾನು ಬಂಧನದಲ್ಲಿಟ್ಟಿದ್ದೇನೆ. ಯಾವ ಕ್ಷಣದಲ್ಲಿ ಬೇಕಾದರೂ ಅರುಗೇಂದ್ರನ ತಲೆಯನ್ನು ಕತ್ತರಿಸಿ ಹಾಕಬಹುದು. ಆದರೆ ನಾನು ಆ ರೀತಿ ಅರುಗೇಂದ್ರನನ್ನು ಕೊಲ್ಲುವುದಿಲ್ಲ ಅರುಗೇಂದ್ರನನ್ನು ಮುಷ್ಟಿಯಲ್ಲಿಟ್ಟುಕೊಂಡು ಪತ್ತೇದಾರ್ ಶಂಕರನನ್ನು ಬ್ಲಾಕ್ ಮೈಲ್ ಮಾಡುತ್ತೇನೆ ಶಂಕರ್ ನನ್ನ ಎದುರಾಗಿ ಹೋದರೆ ಅರುಗೇಂದ್ರನನ್ನು ಕತ್ತರಿಸಿ ಹಾಕುತ್ತೇನೆ. ಶಂಕರ್ ತನ್ನ ಮಿತ್ರನ ಪ್ರಾಣ ಉಳಿಸಿಕೊಳ್ಳುವುದಕ್ಕೋಸ್ಕರವಾದರೂ ನನ್ನ ಮಾತಿನಂತೆ ನಡೆಯಬೇಕಾಗುತ್ತದೆ.

"ನೀನು ನನ್ನನ್ನು ಯಾವ ರೀತಿ ಮೋಸಪಡಿಸಲೂ ಪ್ರಯತ್ನಿಸುವುದಿಲ್ಲವೆಂದು ನಂಬಿದ್ದೇನೆ.

"ನೆನಪಿರಲಿ—ಈ ರಾತ್ರಿ ಹನ್ನೆರಡು ಘಂಟೆಗೆ ಕೆಂಪು ರೋಜಾಹೂವಿನೊಡನೆ ಗೇಟ್‌ವೇ ಆಫ್ ಇಂಡಿಯಾ ಬಳಿ ಬಾ.

ಇತಿ,

ನಾನು"

ಬೊಂಬಾಯಿವಾಲ ಕಾಗದವನ್ನೋದಿದ. ಕಾಗದದ ಖಡಾಖಂಡಿತ ಬಿರುಸಾದ ಒಕ್ಕಣೆ, ಭಯ ಪ್ರದರ್ಶನ ಮಾಡುವ ಮಾತುಗಳಿಂದ ಬೊಂಬಾಯಿ ವಾಲನಿಗೆ ಕೊಂಚ ಕೋಪ ಬಂದಿತು. ಆದರೆ ಅವನು ಕೋಪ ಮಾಡುವ ಸ್ಥಿತಿಯಲ್ಲಿರಲಿಲ್ಲ. ಪಾಕೀಸ್ತಾನದಿಂದ ಬಂದ ರಹಸ್ಯ ಪತ್ರದ ಪ್ರಕಾರ ಅವನು "ಜೈಪ್ರಕಾಶ್" ವಜ್ರವನ್ನು ಪಾಕೀಸ್ತಾನಕ್ಕೆ ಕಳುಹಿಸಬೇಕಾಗಿತ್ತು. ಶಂಕರ್ ಮತ್ತು ಅರುಣೇಂದ್ರನ ಕೊಂಬೆಯನ್ನು ಬೇರೆ ಮಾಬೇಕಾಗಿತ್ತು. ಅರುಣೇಂದ್ರ ಈ ಡಕಾಯಿತಿಯು ಬಳಿಯೇ ಇದ್ದಾನೆ. ಆದರೆ ಬೊಂಬಾಯಿವಾಲನಿಗೆ ಇದ್ದ ತೊಂದರೆಯೆಂದರೆ ಹಣ. ವಜ್ರವನ್ನು ಕೊಳ್ಳಲು ಅವನ ಬಳಿ ಹಣವಿರಲಿಲ್ಲ. ಹಣ ಕೊಟ್ಟು ವಜ್ರ ಕೊಳ್ಳುವ ಮನಸ್ಸು ಅವನಿಗಿರಲಿಲ್ಲ. ಹೇಗಾದರೂ ಟೋಪಿ ಹಾಕಿ ಆ ಅಮೂಲ್ಯ ವಜ್ರವನ್ನು ಹೊಡೆಯಬೇಕೆಂದು ಬೊಂಬಾಯಿ ವಾಲ ಪ್ಲಾನು ಹಾಕಿದ. ಬೊಂಬಾಯಿವಾಲನಿಗೆ ತಾನು ಎಂಥ ಭಯಂಕರ ಮೂರ್ತಿಯೊಡನೆ ವ್ಯವಹಾರ ನಡೆಸುತ್ತಿದ್ದೇನೆ ಎಂಬ ವಿಷಯ ತಿಳಿದಿರಲಿಲ್ಲ.

ಜನತಾ ಎಕ್ಸ್‌ಪ್ರೆಸ್ಸಿನಲ್ಲಿ ಮೋಹನ್‌ಚಂದ್‌ನನ್ನು ಕೊಂದು "ಜೈಪ್ರಕಾಶ್" ವಜ್ರವನ್ನಪಹರಿಸಿದ ಬೊಂಬಾಯಿನ ಡಾಕುವಿಗೆ ಆ ವಜ್ರವನ್ನು ಶೀಘ್ರವಾಗಿ ಮಾರುವ ಯೋಚನೆ ಬಂದು ಸರಿಯಾದ ಏಜೆಂಟನ್ನು ಹುಡುಕುತ್ತಿದ್ದಾಗ ಪಾಕೀಸ್ತಾನದ ಗುಪ್ತಚಾರ ಬೊಂಬಾಯಿವಾಲನೇ ಈ ಕಾರ್ಯಕ್ಕೆ ಸರಿಯಾದ ವ್ಯಕ್ತಿಯೆಂದು ತಿಳಿದುಬಂದು, ಸಕಲ ವಿವರಗಳನ್ನೂ ಬೊಂಬಾಯಿವಾಲನಿಗೆ ತಿಳಿಸಿದ.

ಬೊಂಬಾಯಿವಾಲನಿಗೆ ಆ ವಜ್ರವನ್ನು ಕೊಳ್ಳುವುದಾಗಿ ಪಾಕೀಸ್ತಾನ ದಿಂದ ಕಾಗದ ಬಂದಿತ್ತು. ವಜ್ರ ಕೈಗೆ ಬಂದ ಪಾಕೀಸ್ತಾನದ ಗುಪ್ತಚಾರರ ಕೈಗೆ ಕೊಟ್ಟರೆ ಅವನಿಗೆ ಹಣ ದೊರೆಯುತ್ತಿತ್ತು. ಮುಂಚೆ ಅಡ್ವಾನ್ಸ್ ಕೇಳಿ ದರೆ ಅವರು ಕೊಡುತ್ತಿರಲಿಲ್ಲ. ಮುಂಚೆ ಹಣ ಕೊಟ್ಟು ವಜ್ರವನ್ನು ಕೊಂಡು ಅವನ್ನು ಪಾಕೀಸ್ತಾನಕ್ಕೆ ಸಾಗಿಸಬೇಕಾಗಿತ್ತು. ವಜ್ರವನ್ನು ಕೊಳ್ಳಲು ಬೊಂಬಾಯಿವಾಲನ ಬಳಿ ಹಣವಿರಲಿಲ್ಲ.

ಆದ್ದರಿಂದ ಅವನು ಹೇಗಾದರೂ ಮಾಡಿ, ಜನತಾ ಎಕ್ಸ್‌ಪ್ರೆಸ್ಸಿನಲ್ಲಿ ಮೋಹನ್‌ಚಂದ್‌ನನ್ನು ಕೊಂದು ವಜ್ರವನ್ನು ಅಪಹರಿಸಿದ ಡಾಕುವನ್ನು ಕೊಂದು ಅಥವಾ ಯಾವುದಾದರು ರೀತಿಯಲ್ಲಿ ಮೋಸಪಡಿಸಿ ಆ ವಜ್ರವನ್ನು ದಕ್ಕಿಸಿ

ಕೊಳ್ಳಬೇಕಾಗಿತ್ತು. ಆ ದಾರಿಯಲ್ಲದೆ ಬೇರೆ ಯಾವ ದಾರಿಯೂ ಅವನಿಗೆ ಗೋಚರಿಸಲಿಲ್ಲ.

ಈ ದಿನ ರಾತ್ರಿ ಬೊಂಬಾಯಿವಾಲನಿಗೆ ಆ ಢಾಕುವಿನಿಂದ ಕರೆ ಬಂದಿತ್ತು. ಯಾವುದೋ ಕಾರಿನಲ್ಲಿ ಕುಳಿತು ಅವನು-ಆ ಢಾಕುವಿನ ಬಳಿಗೆ ಹೋಗಬೇಕಾಗಿತ್ತು. ಅಂಥ ಪಂಚರಂಗಿಯ ವಾಸಸ್ಥಳಕ್ಕೆ ಏಕಾಕಿಯಾಗಿ ಹೋಗುವುದು ಅಪಾಯಕಾರಿ ಎಂಬ ಭಾವ ಬೊಂಬಾಯಿವಾಲನ ಮನಸ್ಸಿಗೆ ಬಂದಿತು. ಅದು ಅಲ್ಲದೆ ಬೊಂಬಾಯಿವಾಲ ಆ ವಜ್ರವನ್ನು ಅಪಹರಿಸಬೇಕೆಂಬ ಮನೋಭಾವದಿಂದಿದ್ದ. ತಾನು ಆ ಢಾಕುವಿನ ಮನೆಗೆ ಯಾವ ರೀತಿ ಹೋಗಬೇಕು? ಏನು ಮಾಡಬೇಕೆಂಬ ವಿಚಾರವನ್ನೆಲ್ಲಾ ವಿವೇಚನಾಪೂರ್ಣವಾಗಿ ಆಲೋಚಿಸಿ ಅದಕ್ಕೆ ತಕ್ಕ ಏರ್ಪಾಡು ಮಾಡಿಕೊಂಡ. ಕಾಲ ಕೂಡಿಬಂದಿತು. ಬೊಂಬಾಯಿವಾಲ ಆ ಭಯಂಕರ ಢಾಕುವಿನ ಭೇಟಿಗೆ ಹೊರಟ.

೬

ಬೊಂಬಾಯಿವಾಲ ಕರಿಯ ಉಲ್ಲನ್ ಸೂಟು ಹಾಕಿಕೊಂಡಿದ್ದ. ಅವನ ತಿಲಗ್ಬೈನಲ್ಲಿ ಒಂದು ಕೆಂಪು ರೋಜಾ ಹೂ ಇದ್ದಿತು. ಸಮುದ್ರದಿಂದ ಬೀಸು ತ್ತಿದ್ದ ತಂಗಾಳಿ ಛಳಿಯನ್ನುಂಟುಮಾಡುತ್ತಿತ್ತು. ಜೇಬಿನಿಂದ ಒಂದು ಸ್ಪೇಸರ್ ಚುಟ್ಟಾ ತೆಗೆದು ಹಚ್ಚಿದ.

ಅದರಿಂದ ಕೊಂಚ ಛಳಿ ಕಡಿಮೆಯಾಯಿತು. ಗೇಟ್ ವೇ ಆಫ್ ಇಂಡಿಯಾದ ಬಳಿ ಹೆಚ್ಚು ಜನಸಂದಣಿ ಇರಲಿಲ್ಲ. ಅಲ್ಲಲ್ಲಿ ಪೋಲೀಸರು ಓಡಿ ಯಾಡುತ್ತಿದ್ದರು. ಆ ಪೋಲೀಸರನ್ನು ನೋಡಿ ಬೊಂಬಾಯಿವಾಲನಿಗೆ ನಗು ಬಂದಿತು. ಅವರು ಎಂಥಹ ಮಹಾ ಮೂರ್ಖರು. ನಾನು, ಸುಪ್ರಸಿದ್ಧ ದಗಾಕೋರ, ಪಾಕೀಸ್ತಾನದ ಗುಪ್ತಚಾರ ಇಲ್ಲಿಯೇ ನಿಂತುಕೊಂಡಿದ್ದೇನೆ. ವಜ್ರವನ್ನು ಅಪಹರಿಸಿರುವ ಮೇಧಾವಿ ಚೋರ ಈಗ ನನ್ನ ಭೇಟಿಗೆ ಬರಲಿ ದ್ದಾನೆ. ಈ ಪೋಲೀಸರು ಗುಗ್ಗುಗಳಂತಿದ್ದಾರೆ—ಈ ಯೋಚನೆಯ ಮಧ್ಯ ದಲ್ಲಿ ಪತ್ತೇದಾರ್ ಶಂಕರ್‌ನ ವಿಷಯ ಅವನ ತಲೆಯಲ್ಲಿ ಸುಳಿಯಿತು. ಅತ್ಯಂತ ಧೈರ್ಯದಿಂದಿದ್ದ ಅವನ ಮನಸ್ಸಿಗೆ ಶಂಕರ್‌ನ ಹೆಸರು ಜ್ಞಾಪಕಕ್ಕೆ ಬಂದ ಕೂಡಲೆ ಕೊಂಚ ಭಯ ಮೂಡಿತು. ಶಂಕರ್—ಆ ಹೆಸರೆ ಎಂಥ ದರೋಡೆ ಗಾರನನ್ನೂ ಬೆದರಿಸುತ್ತಿತ್ತು. ಶಂಕರ್ ಯಾವ ವೇಷದಲ್ಲಿ ಯಾವ ತಂತ್ರದಲ್ಲಿ ನಮ್ಮನ್ನು ಹಿಡಿದುಬಿಡುತ್ತಾನೋ ಎಂಬ ಭಯ ಪ್ರತಿಯೊಬ್ಬ ಪಂಚರಂಗಿಯ ಮನಸಿನಲ್ಲೂ ಮೂಡಿರುತ್ತಿತ್ತು. ಅವನು ಎಂಥ ಕಷ್ಟಗಳಿಗೂ ಹೆದರುತ್ತಿರಲಿಲ್ಲ. ಭೇತಾಳಪುರದ ರಾಣಿಯನ್ನು ಹಿಡಿದ, ಕ್ಲಬ್ಬಿನಲ್ಲಿ ಕೊಲೆಯಾದಾಗ ಆ ರಹಸ್ಯ ವನ್ನು ಬಿಡಿಸಿದ, ಮಾಯವಾದ ಮೋಹಿನಿಯ ಮಹತ್ ಸಮಸ್ಯೆಯನ್ನು ಬಿಡಿ ಸಿದ. ಅಪ್ಸರೆಯ ಕೊಲೆಯ ಹಿಂದಿದ್ದ ಅಮೋಘ ರಹಸ್ಯವನ್ನು ಕಂಡುಹಿಡಿದ,

ಮೃತ್ಯುಪಂಜರದ ಮೊಕದ್ದಮೆಯಲ್ಲಿ ಕೆಲಸಮಾಡಿದ ಅವನು ಮಹಾ ಸಾಹಸಿ, ಚತುರ. ದರೋಡೆಗಾರರಿಗೆ ಸಿಂಹಸ್ವಪ್ನದಂತಿದ್ದ ಶಂಕರ್‌ನಿಗೆ ಪತ್ತೇದಾರಿಕೆ ದೈವದತ್ತ ವರ.

ರಾತ್ರಿ ಹನ್ನೆರಡು ಘಂಟೆ ಹೊಡೆಯಿತು. ಜನಸಂದಣಿ ಕ್ರಮೇಣವಾಗಿ ಕಡಿಮೆಯಾಗಿತ್ತು. ಗೇಟ್ ವೇ ಆಫ್ ಇಂಡಿಯಾದ ದೊಡ್ಡದಾದ ಕಂಬಕ್ಕೆ ಒರಗಿಕೊಂಡು ಬೊಂಬಾಯಿವಾಲ ಸಿಗರೇಟು ಸೇದುತ್ತಾ ನಿಂತಿದ್ದ. ಹನ್ನೆರಡು ಗಂಟೆ ಹೊಡೆದು ಒಂದು ನಿಮಿಷವಾಯಿತು. ಕರಿಯ ಫೋರ್ಡ್ ಕಾರೊಂದು ಸರ್ರನೆ ಬಂದು ಬೊಂಬಾಯಿವಾಲನ ಮುಂದೆ ನಿಂತಿತು. ಬೊಂಬಾಯಿವಾಲ ಕೈಲಿದ್ದ ರೋಜಾಹೂವನ್ನು ಬಿಸಾಕಿದ. ಕಾರಿನ ಹೆಡ್‌ಲೈಟಿನ ಮುಂದೆ ಬಿದ್ದ ಕೆಂಪು ರೋಜಾ ಡ್ರೈವರನ ಕಣ್ಣಿಗೆ ಬಿದ್ದಿತು.

ಕಾರಿನ ಬಾಗಿಲು ತೆರೆಯಿತು.

ಬೊಂಬಾಯಿವಾಲ ಕಾರನ್ನು ಹತ್ತಿದ. ಮತ್ತೆ ಬಾಗಿಲು ಹಾಕಿಕೊಂಡಿತು. ಡ್ರೈವರ್ ಕಾರನ್ನು ಸ್ಟಾರ್ಟ್ ಮಾಡಿದ. ಕಾರಿನ ಒಳಗೆ ಒಬ್ಬ ವ್ಯಕ್ತಿ ಕುಳಿತಿದ್ದ. ಅವನು ಬೊಂಬಾಯಿವಾಲನ ಕಣ್ಣಿಗೆ ಕರ್ಚಿಫ್ ಕಟ್ಟಿದ.

"ಇದೇನು ?"

ಬೊಂಬಾಯಿವಾಲ ಪ್ರಶ್ನಿಸಿದ.

"ನಮ್ಮ ಗುಂಪಿಗೆ ಸಂಪೂರ್ಣವಾಗಿ ಸೇರದ ಯಾವ ವ್ಯಕ್ತಿಗೂ ನಮ್ಮ ರಹಸ್ಯ ಸ್ಥಾನವನ್ನು ತೋರಿಸುವುದಿಲ್ಲ. ನಮ್ಮ ಯಜಮಾನರ ಅಪ್ಪಣೆ ಏನೆಂದರೆ—ಕಣ್ಣಿಗೆ ಬಟ್ಟೆ ಕಟ್ಟಿ ಕರೆದುಕೊಂಡು ಬನ್ನಿ ಎಂದು. ನಾನು ಅವರ ಅಪ್ಪಣೆಯನ್ನು ಪರಿಪಾಲಿಸಿದ್ದೇನೆ."

"ಸರಿ."

ಆ ಭಯ ಪ್ರದರ್ಶನ ಮಾಡುವ ಪತ್ರ, ಖಡಾಖಂಡಿತ ಎಚ್ಚರಿಕೆ, ಈ ರೀತಿ ಕಣ್ಣಿಗೆ ಬಟ್ಟೆ ಕಟ್ಟಿ ಕರೆದುಕೊಂಡು ಹೋಗುವುದು. ಆ ಢಾಕುವಿನ ಪ್ರತಿಯೊಂದು ರೀತಿಯೂ ಬೊಂಬಾಯಿವಾಲನಿಗೆ ವಿಪರೀತ ಕೋಪ ಬರಿಸಿತು. ಆದರೂ ಅವನು ಆ ಅಮೂಲ್ಯ "ಜೈಪ್ರಕಾಶ್" ವಜ್ರವನ್ನು ಹೊಡೆಯುವುದ ಕ್ಕೋಸ್ಕರ ಸಮಾಧಾನದಿಂದ ಸಕಲವನ್ನೂ ಸಹಿಸಿಕೊಳ್ಳಲೇಬೇಕಾಗಿತ್ತು; ಅಂತೆಯೇ ಸಹಿಸಿಕೊಂಡ. ಮನಸ್ಸಿನಲ್ಲಿ ಆ ಢಾಕುವಿನ ತಲೆಯನ್ನು ಹಾರಿಸಿ

ಆ ಅಮೂಲ್ಯ ವಜ್ರವನ್ನು ಅಪಹರಿಸದಿದ್ದರೆ ನನ್ನ ಹೆಸರು ಪಂಚರಂಗಿ ಬೊಂಬಾಯಿವಾಲ ಅಲ್ಲ, ಎಂದು ಅಂದುಕೊಂಡ.

ಬೊಂಬಾಯಿವಾಲನಿಗೆ ಕಣ್ಣಿಗೆ ಬಟ್ಟೆಕಟ್ಟಿದ್ದರಿಂದ ಕಾರು ಯಾವ ರಸ್ತೆಯಲ್ಲಿ ಯಾವ ದಿಕ್ಕಿಗೆ ಹೋಗುತ್ತಿದೆ ಎಂಬ ಯಾವ ವಿಷಯವೂ ತಿಳಿಯಲು ಸಾಧ್ಯವಿರಲಿಲ್ಲ.

ಕಾರು ತುಂಬಾ ವೇಗದಿಂದ ಹೋಗುತ್ತಿತ್ತು. ಅರ್ಧ ಗಂಟೆಯಕಾಲ ಕಾರು ಶರವೇಗದಲ್ಲಿ ಓಡಿ ಒಂದು ಕಡೆ ನಿಂತಿತು. ಕಾರಿನಲ್ಲಿದ್ದ ವ್ಯಕ್ತಿ ಬೊಂಬಾಯಿವಾಲನ ಕೈಹಿಡಿದುಕೊಂಡು ಒಂದು ಮನೆಯೊಳಗೆ ಕರೆದುಕೊಂಡು ಹೋದ. ಅದು ಬಂಗಲೆಯೋ, ಒಂದು ಚಿಕ್ಕ ಕುಟೀರವೇ, ಒಂದು ಗುಹೆಯೋ ಯಾವುದೂ ಬೊಂಬಾಯಿವಾಲನಿಗೆ ತಿಳಿಯುವಂತಿರಲಿಲ್ಲ ಅದಕ್ಕೆ ಕಾರಣ ಕಣ್ಣಿಗೆ ಕಟ್ಟಿದ್ದ ಕರ್ಚಿಫ್.

ಕೈಹಿಡಿದು ಕರೆದುಕೊಂಡು ಹೋದ ವ್ಯಕ್ತಿ ಬೊಂಬಾಯಿವಾಲನನ್ನು ಒಂದು ಚಿಕ್ಕ ಕೊಠಡಿಯಲ್ಲಿ ಕೂಡಿಸಿದ.

ಕೆಲವು ನಿಮಿಷಗಳು ಕಳೆದುವು.

ಯಾರೋ ಒಬ್ಬರು ಬಂದು ಬೊಂಬಾಯಿವಾಲನ ಕಣ್ಣಿಗೆ ಕಟ್ಟಿದ್ದ ಕರ್ಚೀಫನ್ನು ಬಿಚ್ಚಿದರು.

ಕರ್ಚೀಫನ್ನು ಬಿಚ್ಚಿದ ವ್ಯಕ್ತಿ ಯಾರು? ಎಂಬ ಕುತೂಹಲದಿಂದ ಆ ವ್ಯಕ್ತಿಯ ಕಡೆ ಬೊಂಬಾಯಿವಾಲ ತಿರುಗಿನೋಡಿದ. ಅವನ ಆಸೆ ನಿರಾಸೆಯಾಯಿತು.

ಆ ವ್ಯಕ್ತಿ ಎರಡು ಕಣ್ಣುಗಳು ಮಾತ್ರ ಕಾಣುವಂತಿದ್ದ ಒಂದು ಕೆಂಪು ಬಟ್ಟೆಯ ಮುಖವಾಡವನ್ನು ಧರಿಸಿದ್ದ.

ಅವನ ಆ ಮುಖ ಅತ್ಯಂತ ಭಯಂಕರವಾಗಿತ್ತು. ರಾತ್ರಿಯ ಹೊತ್ತಿನಲ್ಲಿ ಕರಿಯಉಡುಪಿನ ಕೆಂಪು ಮುಖವಾಡದ ವ್ಯಕ್ತಿಯನ್ನು ನೋಡಿದರೆ ಭಯಗೊಳ್ಳುವುದರಲ್ಲಿ ಯಾವ ಸಂಶಯವೂ ಇರಲಿಲ್ಲ.

ಅನೇಕ ಭಯಂಕರ ಘಾಕುಗಳನ್ನು ನೋಡಿದ್ದ ಬೊಂಬಾಯಿವಾಲನಿಗೆ ಆ ವ್ಯಕ್ತಿಯ ಆ ವಿಚಿತ್ರ ಉಡುಪಿನ ಮುಖವಾಡದಿಂದ ಮುಚ್ಚಲ್ಪಟ್ಟಿದ್ದ ಮುಖವನ್ನು ಕಂಡೊಡನೆ ಎದೆ ಝಲ್ಲೆಂದಿತು.

ಕರ್ಚೀಫನ್ನು ಬಿಚ್ಚಿದ ಆ ವ್ಯಕ್ತಿ ಬೊಂಬಾಯಿವಾಲನ ಮುಂದೆ ಒಂದು ಉದ್ದವಾದ ಗ್ಲಾಸು ಮತ್ತು ಒಂದು ಬಾಟಲನ್ನಿಟ್ಟು ಹೊರಟುಹೋದ. ಅವನು ಹೋಗಿ ಹೊರಗಿನಿಂದ ಬಾಗಿಲು ಹಾಕಿಕೊಂಡ.

ಬೊಂಬಾಯಿವಾಲ ಜೇಬಿನಿಂದ ಸ್ಪೆಷಲ್ ಚುಟ್ಟವೊಂದನ್ನು ತೆಗೆದು ಹಚ್ಚಿದ ಅವನ ಮನಸ್ಸೇ ಒಂದು ರೀತಿಯಾಗಿದ್ದಿತು. ಎರಡುಬಾರಿ ಚುಟ್ಟಾ ಸೇದಿದಮೇಲೆ ಅವನಿಗೆ ಸ್ವಲ್ಪ ಸಮಾಧಾನವಾಯಿತು. ಎದುರಿಗಿದ್ದ ಬೀರುಬಾಟಲು ಅವನ ಗಮನವನ್ನು ಸೆಳೆಯಿತು. ಬಾಟಲಿನಿಂದ ಗ್ಲಾಸಿಗೆ ಬೀರನ್ನು ಸುರಿದ. ತುಟಿಗೆ ತಗುಲಿಸಿದ. ಲೈಟ್ ಬೀರ್ ಆ ಚಳಿಯಲ್ಲಿ ಹಿತ ಕರವಾಗಿತ್ತು. ಒಳ್ಳೆಯ ಫ್ರೆಷ್ ಬೀರ್ ಕುಡಿದು ಬಹಳ ದಿನವಾಗಿತ್ತು. ಬೊಂಬಾಯಿಯಲ್ಲಿ ಪಾನ ನಿಷೇದಾಜ್ಞೆ ಬಂದಮೇಲೆ ಒಳ್ಳೆಯ ಬ್ರಾಂದಿ ಬೀರು ಗಳು ಸ್ವಪ್ನವಾಗಿಹೋಗಿತ್ತು. ಸರ್ಕಾರದ ಕಣ್ಣಿಗೆ ಮಣ್ಣುತೂರಿ ಬ್ರಾಂದಿ ಬೀರುಗಳನ್ನು ಮಾರುತ್ತಿದ್ದರು. ಬೊಂಬಾಯಿವಾಲನಿಗೆ ಲಾರ್ಜ್ ವಿಸ್ಕಿ ಎಂದರೆ ಪ್ರಾಣ. ನಿಷೇಧಾಜ್ಞೆ ಬಂದಮೇಲೆ ಕಳ್ಳ ಮಾರಾಟಗಾರರು ಅದರ ಬೆಲೆಯನ್ನು ಒಂದಕ್ಕೆರಡಾಗಿ ಏರಿಸಿದ್ದರು. ಸಂಪಾದನೆ ಚೆನ್ನಾಗಿದ್ದಾಗ ಬೊಂಬಾಯಿವಾಲ ವಿಸ್ಕಿಯನ್ನು ಸೇವಿಸುತ್ತಿದ್ದ. ಒಂದೊಂದು ಸಮಯದಲ್ಲಿ ಬೊಂಬಾಯಿವಾಲನಿಗೆ ಹಣದ ಅಡಚಣೆ ವಿಪರೀತವಾಗುತ್ತಿತ್ತು ಆಗ ವಿಸ್ಕಿಯ ಬದಲು ಟಿಂಚರ್‌ಗೆ ನೀರು ಬೆರೆಸಿ ಕುಡಿಯುತ್ತಿದ್ದ. ಕಡಿಮೆ ಬೆಲೆಯ ಬೀರಿನಿಂದ ತೃಪ್ತಿಪಟ್ಟುಕೊಳ್ಳುತ್ತಿದ್ದ. ಈಗ್ಗೆ ಕೆಲವು ದಿನಗಳಿಂದ ಜೈಲಿನಿಂದ ಹೊರಬಂದಮೇಲೆ ಒಳ್ಳೆಯ ಬೀರು, ರಂ, ಜಿಗಳ ಕುಡಿತ ಕನ ಸಾಗಿಹೋಗಿತ್ತು. ಈಗ ಎದುರಿಗೆ ಫ್ರೆಷ್ ಲೈಟ್ ಬೀರ್‌ಬಾಟಲು ಕುಳಿತಿದೆ. ಬೊಂಬಾಯಿವಾಲ ಹತ್ತು ನಿಮಿಷಗಳಲ್ಲಿ ಬಾಟಲನ್ನು ಮುಗಿಸಿದ. ಮನಸ್ಸಿಗೆ ಕೊಂಚ ತೃಪ್ತಿಯಾಯಿತು.

ಕುಳಿತಿದ್ದ ಕೊಠಡಿಯನ್ನು ಸೂಕ್ಷ್ಮವಾಗಿ ಅವಲೋಕಿಸಿದ. ಅದೊಂದು ಚಿಕ್ಕದಾದ ಕೊಠಡಿ. ಗೋಡೆಗೆ ಹಸಿರುಬಣ್ಣವನ್ನು ಬಳಿದಿತ್ತು. ಅವನು ಕುಳಿತಿದ್ದ ಜಾಗದಿಂದ ಐದು ಗಜ ದೂರದಲ್ಲಿ ಒಂದು ಅಗಲವಾದ ಹಸಿರು ಪರದೆಯನ್ನು ಹಾಕಿತ್ತು. ಹಸಿರು ಟ್ಯೂಬ್ ಲೈಟನ್ನು ಹಾಕಿದರು. ಕೊಠ

ಡಿಯ ಮಧ್ಯದಲ್ಲಿ ನಾಲ್ಕು ಸೋಫಗಳನ್ನು ಚಚ್ಚೌಕವಾಗಿ ಹಾಕಲಾಗಿತ್ತು. ಆ ಸೋಫಗಳ ಮಧ್ಯದಲ್ಲಿ ಒಂದು ದುಂಡು ಮೇಜನ್ನು ಹಾಕಲಾಗಿತ್ತು.

ಬೊಂಬಾಯಿವಾಲ ಕೊಠಡಿಯನ್ನೆಲ್ಲಾ ಸೂಕ್ಷ್ಮವಾಗಿ ಅವಲೋಕಿಸಿದ. ಹಾಕಿದ್ದ ಒಂದು ಕಿಟಕಿಯ ಬಾಗಿಲನ್ನು ತೆರೆಯಲು ಪ್ರಯತ್ನಿಸಿ ವಿಫಲನಾದ.

ಹಸಿರು ಪರದೆಯ ಹಿಂದೆ ಯಾವುದೋ ಒಂದು ವ್ಯಕ್ತಿ ಕುಳಿತುಕ್ಕೊಂಡ.

"ಸೋಫಾದ ಮೇಲೆ ಕುಳಿತುಕೊ ಬೊಂಬಾಯಿವಾಲ."

ಬೊಂಬಾಯಿವಾಲ ಮಾತನಾಡದೆ ಸೋಫಾದ ಮೇಲೆ ಕುಳಿತುಕ್ಕೊಂಡ.

"ನೀನು ವಜ್ರವನ್ನು ಕೊಳ್ಳಲು ಇಷ್ಟಪಡುತ್ತೀಯಾ ?"

"ಹೂ."

"ನಾನು ನಿನಗೆ ತಿಳಿಸಿದಷ್ಟು ಹಣವನ್ನು ಕೊಡಲು ಸಿದ್ಧವಾಗಿದ್ದೀಯಾ?"

"ಆಗಲಿ."

"ಎಷ್ಟು ದಿನಗಳಲ್ಲಿ ಕೊಡುತ್ತೀಯೆ ?"

"ಇನ್ನು ಎರಡು ದಿನಗಳಲ್ಲಿ."

"ಹಣವನ್ನು ಹತ್ತು ರೂಪಾಯಿ ನೋಟುಗಳಲ್ಲಿ ಕೊಡಬೇಕು."

"ಆಗಬಹುದು."

"ನಾಡಿದ್ದು ರಾತ್ರಿ ಹನ್ನೆರಡು ಗಂಟೆಗೆ ಗೇಟ್ ವೇ ಆಫ್ ಇಂಡಿಯಾ ಬಳಿ ಹಣದೊಡನೆ ನಿಂತುಕೊಂಡಿರು. ಒಂದು ಕರಿಯ ಕಾರು ಬರುತ್ತದೆ. ಅದರಲ್ಲಿ ಹಣದ ಚೀಲವನ್ನು ಹಾಕಿಬಿಡು. ಕಾರು ಹೊರಟು ಹೋಗುತ್ತದೆ. ಮತ್ತೆ ಹದಿನೈದು ನಿಮಿಷಗಳಾದ ಮೇಲೆ ಮತ್ತೊಂದು ಕಾರು ಬರುತ್ತದೆ. ಆ ಕಾರಿನಿಂದ ಒಬ್ಬ ವ್ಯಕ್ತಿ ಇಳಿದು ಒಂದು ಪುಟ್ಟ ಡಬ್ಬಿಯನ್ನು ಕೊಡುತ್ತಾನೆ. ಅದರಲ್ಲಿ ವಜ್ರವಿರುತ್ತದೆ. ನೀನು ನಮ್ಮ ಹೇಳಿಕೆಯಂತೆ ನಡೆದರೆ ಮಾತ್ರ ವಜ್ರವನ್ನು ಕೊಡಲು ಸಾಧ್ಯ. ಮತ್ತೊಂದು ಎಚ್ಚರಿಕೆಯ ಮಾತು. ನಿನಗೆ ಎಂತಹ ತೊಂದರೆಯೋ ಬರಲಿ ನಮ್ಮ ಈ ವ್ಯವಹಾರವನ್ನು ಬಾಯಿಬಿಡ ಬಾರದು. ಹಾಗೆ ಹೇಳಿದ್ದೇ ಆದರೆ ನಿನ್ನ ರುಂಡವನ್ನು ಮುಂಡದಿಂದ ಹಾರಿಸಿ ಬಿಡುತ್ತೇನೆ. ನಾಡಿದ್ದು ರಾತ್ರಿ ನಾನು ಹೇಳಿದ ಹೊತ್ತಿಗೆ ನಾನು ಹೇಳಿದಷ್ಟು ಹಣದೊಡನೆ ನೀನು ಬರದಿದ್ದರೆ ಮುಂದೆಂದು ನೀನು ವಜ್ರದ ಮುಖವನ್ನು

ಕಾಣಲಾರೆ. ನನ್ನನ್ನು ಯಾವ ರೀತಿಯಲ್ಲಾದರು ಮೋಸಪಡಿಸಲು ಪ್ರಯತ್ನ ಪಟ್ಟರೆ ಅನ್ಯಾಯವಾಗಿ ಪ್ರಾಣವನ್ನು ಕಳೆದುಕೊಳ್ಳುತ್ತೀಯೇ, ಎಚ್ಚರಿಕೆ."

ಬೊಂಬಾಯಿವಾಲ ಅವನು ಹೇಳಿದ ಪ್ರತಿಯೊಂದು ಮಾತನ್ನೂ ಕೇಳಿದ.

"ನಾನು ವಜ್ರವನ್ನು ಒಂದು ಬಾರಿ ನೋಡಲು ಅಪೇಕ್ಷೆಪಡುತ್ತೇನೆ."

—ಬೊಂಬಾಯಿವಾಲ ಹೇಳಿದ.

ಅವನ ಮಾತಿಗೆ ಪರದೆಯ ಹಿಂದಿದ್ದ ವ್ಯಕ್ತಿ ಏನೋ ಉತ್ತರವನ್ನು ಹೇಳಲು ಬಾಯಿ ತೆಗೆದ. ಅಷ್ಟರಲ್ಲಿ ಮತ್ತೊಬ್ಬ ವ್ಯಕಿ ಬಂದು ಪರದೆ ಹಿಂದೆ ಕುಳಿತಿದ್ದ ವ್ಯಕ್ತಿಯ ಕಿವಿಯಲ್ಲಿ ಏನನ್ನೋ ಹೇಳಿದ.

"ಹ್ಞಾ !"

ಆ ವ್ಯಕ್ತಿ ಬಂದೂಕಧಾರಿಯಾಗಿ, ಪರದೆಯನ್ನು ಕಿತ್ತುಹಾಕಿ ಬೊಂಬಾಯಿ ವಾಲನ ಎದುರಿಗೆ ನಿಂತುಕೊಂಡ. ಅದೇ ಕೆಂಪು ಮುಖವಾಡದ ಭಯಂಕರ ಮುಖ.

"ಬೊಂಬಯಿವಾಲ, ನಮ್ಮ ರಹಸ್ಯ ಸ್ಥಾನವನ್ನು ತಿಳಿದುಕೊಳ್ಳಲು ನೀನು ನಮ್ಮ ಕಾರನ್ನು ಹಿಂಬಾಲಿಸುವಂತೆ ಒಬ್ಬ ವ್ಯಕ್ತಿಗೆ ಹೇಳಿದೆ. ಅವನು ಈ ಮನೆ ಯನ್ನು ಕಂಡುಕೊಂಡ. ಆದರೆ ಅಷ್ಟರಲ್ಲಿ ಅವನ ರುಂಡ ಹಾರಿತು. ನಾನು ನಿನಗೆ ಮೊದಲೇ ಎಚ್ಚರಿಕೆ ಕೊಟ್ಟಿದ್ದೆ. ಯಾವ ರೀತಿಯಲ್ಲೂ ನಮ್ಮನ್ನು ಮೋಸಪಡಿಸಲು ಪ್ರಯತ್ನಿಸಬೇಡವೆಂದು. ಆದರೆ ನೀನು ನನಗೆ ಟೋಪಿ ಹಾಕಲು ಪ್ರಯತ್ನಿಸಿದೆ. ನಾನು ನಿನ್ನ ಮಾತಿನಂತೆ ನಡೆದುಕೊಳ್ಳುತ್ತೇನೆ "

ಕೆಂಪು ಮುಖವಾಡದ ವ್ಯಕಿ ಯ ಕೈಲಿದ್ದ ಬಂದೂಕದಿಂದ "ಢಂ" ಎಂದು ಒಂದು ಗುಂಡು ಹಾರಿತು.

ಆ ಗುಂಡು ಬೊಂಬಾಯಿವಾಲನ ಎದೆಯನ್ನು ಪ್ರವೇಶಿಸಿತು.

"ಆಯ್ಯೋ...." ಎಂಬ ಆರ್ತನಾದ ಬೊಂಬಾಯಿವಾಲನ ಬಾಯಿನಿಂದ ಬಂದಿತು.

ಅವನ ದೇಹ ನೋವಿನಿಂದ ನೆಲಕ್ಕೆ ಜಾರಿತು. ಅವನ ಹೃದಯದಿಂದ ಧಾರಾಕಾರವಾಗಿ ರಕ್ತ ಸುರಿಯುತ್ತಿತ್ತು.

೯

ಶಂಕರ್ ಸಮುದ್ರದಿಂದ ಎತ್ತಿಕೊಂಡು ಬಂದಿದ್ದ ಪೆಟ್ಟಿಗೆಯನ್ನು ನೋಡಲು ಸಿ. ಐ. ಡಿ ಇನ್ಸ್‌ಪೆಕ್ಟರ್ ಆಲಿ ಬಂದರು.

"ಬನ್ನಿ ಮಹಮದಾಲಿಯವರೆ."

"ನಿಮ್ಮ ಇನ್‌ವೆಸ್ಟಿಗೇಷನ್ ಎಲ್ಲಿಯವರೆಗೆ ಬಂದಿದೆ ಶಂಕರ್ ?"

"ಈ ಮೊಕದ್ದಮೆಯನ್ನು ಪ್ರವೇಶಿಸಿದ ಕೆಲವು ದಿನಗಳ ಮೇಲೆ ನನಗೆ ಯಾವ ಸುಳಿವು ಸೂಕ್ಷ್ಮಗಳೂ ಕಂಡುಬರಲಿಲ್ಲ. ಇದೊಂದು ಕೊಲೆಯ ಮೊಕದ್ದಮೆ. ನಿರಪರಾಧಿನಿಯಾದ ಲೀಲಾದೇವಿಯ ನಿರಪರಾಧಿತ್ವವನ್ನು ಸಾಬೀತು ಮಾಡುವ ಉದ್ದೇಶದಿಂದ ಈ ಮೊಕದ್ದಮೆಯನ್ನು ಹಿಡಿದೆ. ಈಗ ಅಲ್ಲಿ ಅನೇಕ ಭಯಂಕರ ಅಪರಾಧಗಳು ಕಣ್ಣಿಗೆ ಬಿದ್ದಿದೆ."

"ಅಂದರೆ ಈ ಮೊಕದ್ದಮೆಯ ವಿಶೇಷವೇನು ?"

"ಈ ಭಯಂಕರ ವ್ಯಾಪಾರಗಳ ಹಿಂದಿರುವ ಭಯಂಕರ ವ್ಯಕ್ತಿ ಈಗಾಗಲೇ ಮೂರು ಕೊಲೆಗಳನ್ನು ಮಾಡಿದ್ದಾನೆ."

"ಮೂರು ಕೊಲೆಗಳೇ !"

"ಹೌದು."

"ಎಲ್ಲಿ ? ಯಾರ ಕೊಲೆ ?"

ಆಲಿಯವರು ಆಶ್ಚರ್ಯದಿಂದ ಪ್ರಶ್ನಿಸಿದರು.

"ಕೊಲೆಯಾದ ವ್ಯಕ್ತಿಯನ್ನು ಬೊಂಬಾಯಿನವರಾದ ನೀವು ಗುರುತಿಸಬೇಕು. ಕೊಲೆಯಾದ ವ್ಯಕ್ತಿಗಳು ಸಾಮಾನ್ಯರಲ್ಲ. ದೇಶದ್ರೋಹಿಗಳು ಮತ್ತು ನೀಚರು. ಯಾವುದೋ ಒಂದು ಭಯಂಕರ ವ್ಯಾಪಾರವನ್ನು ನಡೆಸಲು

ಹೋಗಿ ಕತ್ತರಿಯ ಮಧ್ಯದಲ್ಲಿ ಸಿಕ್ಕಿಹಾಕಿಕೊಂಡು ಇವರು ಮೃತರಾಗಿದ್ದಾರೆ. ಈ ಕೊಲೆಗೂ ಆ ಮೃತ್ಯುವಿಗೂ "ಜೈಪ್ರಕಾಷ್ ಪಜ್ರವೇ ಕಾರಣ."

"ನಿನ್ನ ಮಾತುಗಳೊಂದು ನನಗೆ ಸರಿಯಾಗಿ ಅರ್ಥವಾಗುತ್ತಿಲ್ಲ. ಶಂಕರ್ ಕೊಂಚ ಅರ್ಥವಾಗುವಂತೆ ವಿಶದವಾಗಿ ಹೇಳಿ, ಆಮೇಲಿ ಕೊಲೆಯಾದ ವ್ಯಕ್ತಿಗಳ್ಯಾರು? ಶವವೆಲ್ಲಿದೆ? ಎಂಬ ವಿಚಾರಗಳನ್ನು ವಿಶದವಾಗಿ ಹೇಳು."

—ಶಂಕರ್ ಆಲಿಯವರ ಮಾತನ್ನು ಕೇಳಿದ. ಅಲ್ಲಿದ್ದ ವ್ಯಕ್ತಿಗಳು ಆಲಿ, ರಾಮ್‌ಚಂದ್ ಮತ್ತು ಶಂಕರ್. ಅವರು ರಾಮ್‌ಚಂದ್‌ನ ಮನೆಯಲ್ಲಿ ಮಾತನಾಡುತ್ತಾ ಕುಳಿತಿದ್ದರು

ಮನೆಯ ಬಾಗಿಲಿನ ಬಳಿ ಯಾವುದೋ ಒಂದು ವ್ಯಕ್ತಿ ಮಾತುಗಳನ್ನು ಕೇಳುತ್ತಾ ನಿಂತಿತ್ತು. ಯಾವುದೋ ಕಾರಣದಿಂದ ಅದು ಅತ್ಯಂತ ಜಾಗರೂಕವಾಗಿ ಆ ಸ್ಥಳದಿಂದ ಓಡಿತು.

"ಯಾರದು?"

ಆಲಿಯವರು ಗರ್ಜಿಸಿದರು.

ರಾಮಚಂದ್ ರಿವಾಲ್ವರಿನ ಸಹಿತನಾಗಿ ಬಾಗಿಲಬಳಿಗೆ ಹೋಗಿ ಬೀದಿಯಲ್ಲೆಲ್ಲಾ ನೋಡಿದ. ಅವನ ಕಣ್ಣಿಗೆ ಆ ವ್ಯಕ್ತಿ ಕಾಣಿಸಲಿಲ್ಲ. ಇಷ್ಟು ಬೇಗ ಯಾವರೀತಿ ಆ ವ್ಯಕ್ತಿ ಮಾಯವಾದ ಎಂಬುದು ರಾಮಚಂದ್‌ಗೆ ತೋಚಲಿಲ್ಲ.

ರಾಮಚಂದ್‌ನ ಮನೆಯ ಎಡಗಡೆ ಪಕ್ಕದಲ್ಲಿ ಅಂಗಡಿ ಇತ್ತು. ರಾಮಚಂದ್ ಅಂಗಡಿಯವನಿಗೆ "ಈ ಕಡೆ ಯಾವನಾದರೂ ಮನುಷ್ಯ ಓಡಿಹೋದನೆ" ಎಂದು ಪ್ರಶ್ನಿಸಿದ.

ಅವನಿಂದ "ಇಲ್ಲ" ಎಂಬ ಉತ್ತರ ಬಂದಿತು.

ರಾಮಚಂದ್‌ನ ಮನೆಯ ಪಕ್ಕದಲ್ಲಿ ಚಂದ್ರಕುಮಾರ್‌ರವರ ಮನೆ ಇದ್ದಿತು. ಅಲ್ಲೇನಾದರೂ ಬಚ್ಚಿಟ್ಟುಕೊಂಡಿದ್ದಾನೆಯೋ ಎಂದು ರಾಮಚಂದ್ ಚಂದ್ರಕುಮಾರ್‌ರವರ ಮನೆಯನ್ನು ಪ್ರವೇಶಿಸಿದ.

ಚಂದ್ರಕುಮಾರ್ ಹೊರಗಡೆ ವರಾಂಡದಲ್ಲಿದ್ದ ಈಸೀಚೇರ್‌ನ ಮೇಲೆ ಕುಳಿತಿದ್ದರು.

"ಬನ್ನಿ ರಾಮುಚಂದ್, ಏನು ಸಮಾಚಾರ? ಕೈನಲ್ಲಿ ರಿವಾಲ್ವಾರ್ ಬೇರೆ!"

"ಈಕಡೆ ಯಾವನಾದರೊಬ್ಬ ವ್ಯಕ್ತಿ ಓಡಿಹೋದನೆ."

"ಹೌದು, ಈಗೊಬ್ಬ ಸೈಕಲ್ಲಿನ ಮೇಲೆ ಸ್ಪೀಡಾಗಿ ಹೋದ. ಏನು ಸಮಾಚಾರ?"

"ನಾವು ಯಾವುದೋ ಒಂದು ರಹಸ್ಯ ವಿಚಾರವನ್ನು ಮಾತನಾಡುತ್ತಿದ್ದೆವು. ಒಬ್ಬ ವ್ಯಕ್ತಿ ನಮ್ಮ ಮಾತುಗಳನ್ನು ಕದ್ದು ಕೇಳಿಸಿಕೊಳ್ಳುತ್ತಿದ್ದ. ಅವನೇ ಓಡಿಹೋದ. ಅವನನ್ನೇ ನಾನು ಹುಡುಕುತ್ತಿರುವುದು."

—ಚಂದ್ರಕುಮಾರ್ ಆಶ್ಚರ್ಯಭರಿತ ಮುಖಭಾವದಿಂದ ಅವನ ಮಾತನ್ನು ಕೇಳುತ್ತಿದ್ದ.

"ನಿಮ್ಮ ಮನೆಯಲ್ಲಿ ಬಚ್ಚಿಟ್ಟುಕೊಂಡು ಮಾತುಕೇಳಬೇಕಾದರೆ ಅವನ್ಯಾರೋ ಅಸಮಾನ್ಯನೇ ಸರಿ."

—ಚಂದ್ರಕುಮಾರ್‌ನ ಮಾತಿಗೆ ರಾಮುಚಂದ್ ಉತ್ತರ ಕೊಡಲಿಲ್ಲ.

"ಬರುತ್ತೇನೆ ಚಂದ್ರಕುಮಾರ್."

"ಹೂ."

ರಾತ್ರಿ ಎಂಟುಗಂಟೆ ಸಮಯದಲ್ಲಿ ಚಂದ್ರಕುಮಾರ್ ಕೂಲಿಂಗ್‌ಗ್ಲಾಸು ಹಾಕಿಕೊಂಡ. ರಾಮುಚಂದ್ ಅನೇಕ ಬಾರಿ ಚಂದ್ರಕುಮಾರನನ್ನು ಕೇಳಿದ ಆ ಕೂಲಿಂಗ್ ಗ್ಲಾಸು ತೆಗೆಯುವುದಿಲ್ಲವೇ ನೀವು ಎಂದು.

ಅದೇನೋ ಚಂದ್ರಕುಮಾರ್ ಯಾವಾಗಲೂ ಕೂಲಿಂಗ್ ಗ್ಲಾಸು ಹಾಕಿಕೊಂಡು ಇರುತ್ತಿದ್ದ.

ರಾಮುಚಂದ್ ಮತ್ತೆ ಮನೆಗೆ ಹೋದ.

"ಏನು ರಾಮುಚಂದ್, ಆ ವ್ಯಕ್ತಿ ಸಿಕ್ಕಿದನೆ."

"ಇಲ್ಲ."

"ಆಶ್ಚರ್ಯ, ಅವನು ಓಡಿಹೋದ ತಕ್ಷಣ ನೀನು ಹೊರಗೆ ಹೋದೆ. ನೀನು ಬೀದಿ ಸೇರುವಷ್ಟರಲ್ಲಿ ಅವನು ಬೀದಿಯಿಂದಾಚೆ ಓಡಿಹೋಗುವುದು ಅಸಾಧ್ಯ."

"ಆ ವ್ಯಕ್ತಿ ಸೈಕಲ್ಲಿನ ಮೇಲೆ ಹೋಗಿದ್ದಾನೆ."

"ಅದು ನಿನಗೆ ಹೇಗೆ ತಿಳಿಯಿತು."

"ಚಂದ್ರಕುಮಾರ್ ಹೊರಗಡೆ ವರಾಂಡದಲ್ಲಿ ಈಸೀಚೇರಿನ ಮೇಲೆಯೇ ಕುಳಿತಿದ್ದರು. ನಾನು ಅವರನ್ನು ವಿಚಾರಿಸಿದೆ, ಈಗತಾನೇ ಯಾವುದೋ ಒಂದು ವ್ಯಕ್ತಿ ಅತಿ ವೇಗವಾಗಿ ಸೈಕಲ್ಲಿನ ಮೇಲೆ ಹೋದ. ಎಂದು ತಿಳಿಸಿದರು."

"ನೀನು ಹೇಳಿದಂತೆ ಆ ವ್ಯಕ್ತಿ ಸೈಕಲ್ಲಿನ ಮೇಲೆ ಹೋದರೂ, ಇಷ್ಟು ಬೇಗ ಹೋಗಲು ಸಾಧ್ಯವಿಲ್ಲ. ಆ ವಿಷಯವಿರಲಿ. ಆ ವ್ಯಕ್ತಿ ಯಾರು? ಯಾವ ರೀತಿ ಬಂದ? ಹೇಗೆ ಎಲ್ಲಿಗೆ ಹೋದ? ಎಂದು ನಾನು ಕಂಡುಹಿಡಿಯುತ್ತೇನೆ. ಈಗ ನಾವು ಮೊದಲು ಮಾತನಾಡುತ್ತಿದ್ದ ವಿಷಯಕ್ಕೆ ಬರೋಣ. ನಾನು ಏನು ಹೇಳುತ್ತಿದ್ದೆ ಅರಿಯುವರೆ."

"ನೀವು ಈ ಮೊಕದ್ದಮೆಯನ್ನು ಹೇಗೆ ಪ್ರವೇಶಿಸಿದಿರಿ. ಇದುವರೆಗೂ ಆಗಿರುವ ಪ್ರತಿಯೊಂದು ಘಟನೆಗಳನ್ನು ಹೇಳಿ ಶಂಕರ್."

"ಮೋಹನ್‌ಚಂದ್ "ಜೈಪ್ರಕಾಶ್" ಎಂಬ ವಜ್ರದ ಸಹಿತನಾಗಿ, ಬೊಂಬಾಯಿನಿಂದ ಬೆಂಗಳೂರಿಗೆ ಬರುತ್ತಿದ್ದಾಗ ದಾರಿಯಲ್ಲಿ ಯಾರೋ ಅವನನ್ನು ಕೊಲೆಮಾಡಿ ಆ ವಜ್ರವನ್ನು ಅಪಹರಿಸಿದರು. ಆ ಕೊಲೆಯ ಅಪರಾಧ ಅದೇ ಕ್ಯಾರೇಜಿನಲ್ಲಿ ಪ್ರಯಾಣ ಮಾಡುತ್ತಿದ್ದ ಸಿನಿಮಾನಟಿ ಲೀಲಾದೇವಿಯ ಮೇಲೆ ಬಂದಿತು.

"ಅವಳು ನನ್ನ ಬಳಿ ಬಂದು "ಕೊಲೆಪಾತಕಿ ನಾನಲ್ಲ" ಎಂದು ಹೇಳಿದಳು. ಆಗ ನಾನು ಈ ಮೊಕದ್ದಮೆಯನ್ನು ಪ್ರವೇಶಿಸಿದೆ. ಈ ಘಟನೆಗಳ ಮೂಲವ್ಯಕ್ತಿಯಾದ ಥ್ಞಕು ನನ್ನ ಮನೆಗೆ ಬಂದು ಅರುಗೇಂದ್ರನನ್ನು ಬಂಧಿಸಿಕೊಂಡು ಹೋದ.

"ಲೀಲಾದೇವಿಯನ್ನು ಅವನಿಗೆ ಒಪ್ಪಿಸಿದಲ್ಲಿ ಅರುಗೇಂದ್ರನನ್ನು ಬಿಟ್ಟುಬಿಡುವುದಾಗಿ, ಅವನ ಮಾತಿನಂತೆ ನಡೆಯದಿದ್ದರೆ ಅರುಗೇಂದ್ರನ ತಲೆಯನ್ನು ಕತ್ತರಿಸಿ, ನನಗೆ ಪಾರ್ಸಲ್ ಮಾಡುವುದಾಗಿ ತಿಳಿಸಿದ ನನ್ನ ಗೆಳೆಯನ ಪ್ರಾಣ ಉಳಿಸಿಕೊಳ್ಳಲು, ನಾನು ಬೆಂಗಳೂರಿನಿಂದ ಬೊಂಬಾಯಿಗೆ ಬಂದೆ. ಇಲ್ಲಿ ನಾನು ಒಬ್ಬ ವ್ಯಕ್ತಿಯನ್ನು ಹಿಂಬಾಲಿಸಿದೆ. ಆ ವ್ಯಕ್ತಿ ಒಂದು ಪೆಟ್ಟಿಗೆಯನ್ನು ಸಮುದ್ರದಲ್ಲಿ ಎಸೆದ. ಆ ಪೆಟ್ಟಿಗೆಯನ್ನು ಪ್ರಯಾಸದಿಂದ ತಂದಿದ್ದೇನೆ.

ಆ ಪೆಟ್ಟಿಗೆಯಲ್ಲಿ ಎರಡು ರುಂಡಗಳಿವೆ ”

ರಾಮುಚಂದ್ ಪೆಟ್ಟಿಗೆಯನ್ನು ತೆಗೆದ. ಅದರಲ್ಲಿ ತುಂಡುತುಂಡಾದ ಶರೀರ ಮತ್ತು ಎರಡು ರುಂಡಗಳಿದ್ದವು.

ಅದರಲ್ಲಿದ್ದ ಒಂದು ರುಂಡ ಆಲಿಯುವರಿಗೆ ಪರಿಚಿತವಾಗಿತ್ತು. ಅದು ಬೊಂಬಾಯಿವಾಲನ ರುಂಡ. ಮತ್ತೊಂದು ರುಂಡ ಅಲ್ಲಿದ್ದವರ್‍ಯಾರಿಗೂ ಗುರುತಿಸಲಾಗಲಿಲ್ಲ ”

“ಈ ಕೊಲೆಗಳ ಬಗ್ಗೆ ನೀನು ಏನು ಹೇಳುತ್ತೀಯಪ್ಪಾ ಶಂಕರ್.”

ಆಲಿಯುವರು ಶಂಕರ್‌ನನ್ನು ಪ್ರಶ್ನಿಸಿದರು.

“ಈ ಕೊಲೆಯ ಹಿನ್ನೆಲೆಯೂ ಆ ಪ್ರತ್ಯಕ್ಷನೆ ಜೈಪ್ರಕಾಶ್ ವಜ್ರವೇ.”

“ಅದನ್ನು ಹೇಗೆ ಹೇಳುತ್ತೀ?”

“ಒಂದು ರೀತಿಯಲ್ಲಿ ನಾನು ಊಹಿಸಿದ್ದೇನೆ ನನ್ನ ಊಹೆ ಸತ್ಯಕ್ಕೆ ಸಮೀಪವಾಗಿದೆ ಎಂದು ನಾನು ತಿಳಿದುಕೊಂಡಿದ್ದೇನೆ.”

“ನಮಗೂ ಸ್ವಲ್ಪ ನಿನ್ನ ಊಹೆಯನ್ನು ಹೇಳು ಕೇಳೋಣ.”

ಶಂಕರ್ ಜೇಬಿನಿಂದ ಸಿಗರೇಟು ತೆಗೆದು ಅದಕ್ಕೆ ಅಗ್ನಿಸಂಸ್ಕಾರ ಮಾಡಿ ನಿಧಾನವಾಗಿ ಎರಡು ದಂ ಎಳೆದ.

“ಜನತಾ ಎಕ್ಸ್‌ಪ್ರೆಸ್ಸಿನಲ್ಲಿ ಮೋಹನ್‌ಚಂದ್‌ನನ್ನು ಕೊಲೆಮಾಡಿ ವಜ್ರವನ್ನು ಅಪಹರಿಸಿದ. ಆದರೆ ತಕ್ಷಣ ಗಿರಾಕಿಯನ್ನು ಹುಡುಕುವ ಕಾರ್ಯಕ್ಕೆ ಅವನು ಹೋಗಲಿಲ್ಲ. ಆ ವಜ್ರವನ್ನು ಇಲ್ಲಿಯೇ ಎಲ್ಲಾದರೂ ಮಾರುವುದು. ಅದು ಪೋಲೀಸರ ಕಣ್ಣಿಗೆ ಬಿದ್ದು ಇಲ್ಲದ ರಗಳೆಯಾಗುವುದು. ಇದೆಲ್ಲಾ ಆ ಘಾತುಕನಿಗೆ ಸರಿಬೀಳಲಿಲ್ಲ

“ಈ ದೇಶದಿಂದ ಆಚೆಗೆ, ಯಾವುದಾದರೂ ಶತ್ರುರಾಜ್ಯದಲ್ಲಿ ಅದನ್ನು ಮಾರಿಬಿಟ್ಟರೆ ಸರಿಯಾದ ಹಣವು ಸಿಕ್ಕುತ್ತದೆ. ಯಾವ ತೊಂದರೆಯೂ ಇರುವುದಿಲ್ಲ ಎಂದು ಆ ಘಾತುಕ ಆಲೋಚಿಸಿದ. ಅದನ್ನೆಲ್ಲಾ ಸಮರ್ಪಕವಾಗಿ ಮೊದಲು ಸರಿಯಾದ ಏಜೆಂಟನ್ನು ಹುಡುಕಿದ. ಆಗ ಅವನ ಕಣ್ಣಿಗೆ ಬೊಂಬಾಯಿವಾಲ ಬಿದ್ದಿದ್ದಾನೆ. ಬೊಂಬಾಯಿವಾಲ ಮತ್ತು ಈ ಪೆಟ್ಟಿಗೆಯಲ್ಲಿರುವ ಮತ್ತೊಂದು ವ್ಯಕ್ತಿ, ಇಬ್ಬರು ಆ ಘಾತುಕನಿಗೆ ಮೋಸಮಾಡಲು

ಪ್ರಯತ್ನಪಟ್ಟಿದ್ದಾರೆ. ಆ ಧಾಕು ಇಬ್ಬರನ್ನು ಕೊಲೆಮಾಡಿ, ಸಮುದ್ರಕ್ಕೆ ಹಾಕಲು ಹೋಗುತ್ತಿದ್ದಾಗ, ಈ ಎರಡು ಶವಗಳು ನನಗೆ ಅಕಸ್ಮಾತ್ ಸಿಕ್ಕಿದೆ. ನನಗೆ ತಿಳಿದಮಟ್ಟಿಗೆ ಈ ಬೊಂಬಾಯಿವಾಲ, ಪಾಕೀಸ್ಥಾನದ ಗುಪ್ತಚಾರನಂತಿರಬೇಕು. ಭಾರತದ ಅಮೂಲ್ಯ ವಜ್ರ ಮತ್ತು ಇತರ ಅಮೂಲ್ಯ ವಸ್ತುಗಳನ್ನು ಪಾಕೀಸ್ಥಾನಕ್ಕೆ ಸಾಗಿಸುವ ಭಯಂಕರ ಏಜೆಂಟಿರಬೇಕು."

—ಶಂಕರ್‌ನ ಪ್ರತಿಯೊಂದು ಮಾತು, ಆಲಿಯವರಿಗೆ ಆಶ್ಚರ್ಯವನ್ನುಂಟು ಮಾಡಿತು. ಆ ನ್ಯಾಯವಾದಿಯ ನಾಟಕೀಯ ಯಾತ್ರೆ ಅವರನ್ನು ಚಕಿತಗೊಳಿಸಿತು.

"ಹೌದು ಶಂಕರ್ ಬಹುಮಟ್ಟಿಗೆ ನೀನು ಹೇಳುತ್ತಿರುವ ವಿಷಯ ಸತ್ಯ ಎಂದು ನನ್ನ ಮನಸ್ಸಿಗೆ ತೋರುತ್ತಿದೆ. ಬೊಂಬಾಯಿವಾಲ ಕದ್ದ ಮಾಲುಗಳನ್ನು ಹೊರದೇಶಕ್ಕೆ ಸಾಗಿಸುತ್ತಿದ್ದ ಎಂಬ ವಿಷಯ ನಮಗೆ ಸ್ಪಷ್ಟವಾಗಿ ತಿಳಿದಿತ್ತು. ಆ ಅಪಾದನೆಯನ್ನು ಅವನ ಮೇಲೆ ಹೊರಿಸುವಂಥ ಸರಿಯಾದ ಸಾಕ್ಷ್ಯಗಳು ನಮಗೆ ಸಿಕ್ಕಿರಲಿಲ್ಲ.

ಅವನಿಗೆ ಅನೇಕಬಾರಿ ಜೈಲಾಗಿದೆ. ಈಗಲೂ ಯಾವುದೋ ಒಂದು ಮೊಕದ್ದಮೆಯಲ್ಲಿ ಅವನ ಕೈವಾಡವಿದೆಯೆಂದು ನಾವು ಅವನನ್ನು ಹುಡುಕುತ್ತಿದ್ದೇವೆ. ಬೊಂಬಾಯಿವಾಲ ಜೈಪ್ರಕಾಶ್ ವಜ್ರಕ್ಕಾಗಿ ಧಾಕುವಿನ ಬಳಿ ಹೋಗಿ ಅವನ ವಿಳಾಸವನ್ನರಿಯಲು ಗುಪ್ತವಾಗಿ ಅನುಸರಿಸುವಂತೆ ಮತ್ತೊಬ್ಬ ವ್ಯಕ್ತಿಗೆ ಹೇಳಿದ್ದೇನೆ.

"ಹೇಗೊ ಇವರ ಈ ಕಪಟಕಾರ್ಯಾಚರಣೆ ಆ ಧಾಕುವಿಗೆ ತಿಳಿದು ಇಬ್ಬರನ್ನು ಕತ್ತರಿಸಿ ಹಾಕಿ ಸಮುದ್ರಕ್ಕೆ ಹಾಕಲು ಹೋಗಿದ್ದಾನೆ. ಇಷ್ಟು ವಿಷಯ ಸತ್ಯ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಈಗ ನಮ್ಮ ಮುಂದಿರುವ ಪ್ರಶ್ನೆ ಅರುಗೇಂದ್ರನ ಬಿಡುಗಡೆ ಮತ್ತು ಆ ಧಾಕುವಿನ ಬಂಧನ."

"ನೀವು ಆ ವಿಷಯದಲ್ಲಿ ಆಲೋಚಿಸಬೇಡಿ ಆಲಿಯವರೇ, ನಾನು ಎಲ್ಲಾ ಕಾರ್ಯಗಳಿಗೂ ತಕ್ಕ ವ್ಯವಸ್ಥೆ ಮಾಡುತ್ತೇನೆ. ಆದರೆ ನಾವು ಮಾಡಬೇಕಾದ ಕಾರ್ಯಗಳನ್ನು ಅತ್ಯಂತ ಜಾಗರೂಕತೆಯಿಂದ ಮಾಡಬೇಕು. ನಮ್ಮ ಶತ್ರು ಅಪಾಯಕಾರಿ. ಈಗಾಗಲೆ ಅವನು ಮೂರು ಕೊಲೆಗಳನ್ನು ಮಾಡಿದ್ದಾನೆ. ಆ ವಜ್ರಕ್ಕೋಸ್ಕರ ಅವನು ಇನ್ನೂ ಅನೇಕ ಕೊಲೆಗಳನ್ನು ಮಾಡಲು ಹೇಸು

ವುದಿಲ್ಲ. ನಾನು ಈ ಅಪರಾಧಗಳ ವ್ಯಕ್ತಿಯ ಬಗ್ಗೆ ಒಂದು ವಿಧವಾಗಿ ಆಲೋಚಿಸುತ್ತಿದ್ದೇನೆ. ಬಹುಮಟ್ಟಿಗೆ ನನ್ನ ಲೆಕ್ಕಾಚಾರ ತಪ್ಪಾಗುವುದಿಲ್ಲ.

"ಒಂದು ವಿಷಯ ಮಾತ್ರ ಖಚಿತವಾಗಿ ಹೇಳುತ್ತೇನೆ. ಈ ಕೊಲೆಗಳನ್ನು ಮಾಡಿದ ವ್ಯಕ್ತಿ ಯಾವ ಗುಡ್ಡದ ಕೆಳಗಿರುವ ಗುಹೆಯಲ್ಲಿ ವಾಸಿಸುತ್ತಿಲ್ಲ. ಅವನು ನಮ್ಮ ಜೊತೆಯಲ್ಲೇ ಓಡಾಡಿಕೊಂಡು ನಮ್ಮ ಕಾರ್ಯಗಳನ್ನು ಈಕ್ಷಿಸಿ ತನ್ನ ಕಾರ್ಯಗಳನ್ನು ಮಾಡುತ್ತಿದ್ದಾನೆ.

"ನೀನು ಬೊಂಬಾಯಿಗೆ ಬಂದ ಕೆಲವು ಗಂಟೆಗಳಲ್ಲಿ ಅವನು ನನ್ನ ಭೆಟಿ ಮಾಡಿದ. ನಾನು ಬೊಂಬಾಯಿಗೆ ಬರುವ ವಿಚಾರ ಅವನಿಗೆ ತಿಳಿದಿತ್ತು. ಅರುಗೇಂದ್ರನನ್ನು ಬಿಡಿಸಲು ಬೊಂಬಾಯಿಗೆ ಬರದೆ ನನಗೆ ಬೇರೆ ದಾರಿಯೇ ಇರಲಿಲ್ಲ. ನಾನು ಬರುವಾಗ ಆ ಥಾಕುವಿನ ಮಾತಿನಂತೆ ಲೀಲಾದೇವಿಯನ್ನು ಜೊತೆಯಲ್ಲೇ ಕರೆದುಕೊಂಡು ಬಂದೆ. ಆ ಥಾಕು ನಮ್ಮಿಬ್ಬರನ್ನು ಸ್ಟೇಷನಿನಿಂದಲೇ ಹಿಂಬಾಲಿಸಿಕೊಂಡು ಬಂದ. ನಿಮ್ಮ ಪ್ರತಿಯೊಂದು ಕಾರ್ಯಕ್ರಮಗಳು ಅವನಿಗೆ ತಿಳಿದಿದೆ."

"ಅದನ್ನು ನೀನು ಹೇಗೆ ಖಚಿತವಾಗಿ ಹೇಳುತ್ತೀಯ ?"

"ಈಗಾಗಲೇ ಅವನು ಲೀಲಾದೇವಿಯನ್ನು ಭೇಟಿಯಾಗಿರಬಹುದೆಂದು ನಾನು ಊಹಿಸಿದ್ದೇನೆ. ನನ್ನ ಲೆಕ್ಕಾಚಾರಗಳು ಬಹುಮಟ್ಟಿಗೆ ತಪ್ಪಾಗುವುದಿಲ್ಲ. ಹಾಗೆ ನನ್ನ ಊಹೆಯಂತೆ ಸಕಲವೂ ನಡೆದಿದ್ದಲ್ಲಿ ಮುಂದೆ ನಡೆದಲ್ಲಿ ಬಹುಮಟ್ಟಿಗೆ ಅತಿ ಶೀಘ್ರದಲ್ಲೇ ಈ ಮೊಕದ್ದಮೆಯನ್ನು ಮುಗಿಸುತ್ತೇನೆ."

"ನೀನು ಯಾವ ವಿಷಯವೂ ನಮಗೆ ಹೇಳುವುದಿಲ್ಲ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ."

—ರಾಮಚಂದ್‌ನ ಮಾತಿಗೆ ಶಂಕರ್ ಸುಮ್ಮನೆ ನಕ್ಕುಬಿಟ್ಟ.

ಅಪಕ್ವವಾದ ಯಾವ ವಿಷಯವನ್ನೂ ಶಂಕರ್ ಹೇಳುತ್ತಿರಲಿಲ್ಲ. ತನ್ನ ಮನಸ್ಸಿಗೆ ದೃಢವಾದ ಮೇಲೆ, ಸರಿಯಾದ ಆಧಾರಗಳಿಂದ ವಿಷಯ ಸ್ಪಷ್ಟವಾದ ಮೇಲೆ ಶಂಕರ್ ಬಾಯಿಬಿಡುತ್ತಿದ್ದ. ಅತ್ಯಂತ ಆಪ್ತನಾದ ಅರುಗೇಂದ್ರನಿಗೂ ಸಹ ವಿಷಯವನ್ನು ತಿಳಿಸುತ್ತಿರಲಿಲ್ಲ. ಶಂಕರ್‌ನ ಅಸ್ವಾಭಾವ ಗೆಳೆಯ ರಾಮಚಂದ್‌ನಿಗೆ ಚೆನ್ನಾಗಿ ಗೊತ್ತಿತ್ತು."

"ಒಂದು ವಿಷಯ ಶಂಕರ್, ನೀನು ಏಕೆ ಲೀಲಾದೇವಿಯನ್ನು ಸರಿಯಾಗಿ

ನೋಡಿಕೊಳ್ಳುತ್ತಿಲ್ಲ."

"ಅದನ್ನು ನೀವು ಸರಿಯಾಗಿ ವಿವೇಚಿಸಿ ಹೇಳುತ್ತಿಲ್ಲ. ನಾನು ಅವಳನ್ನು ಬೊಂಬಾಯಿ ಕೆಫೆಯಂತಹ ದೊಡ್ಡ ಹೊಟೇಲಿನಲ್ಲಿ ಇಳಿಸಿದ್ದೇನೆ. ಅವಳಿಗೆ ಎಲ್ಲಾ ಅನುಕೂಲವೂ ಸರಿಯಾಗಿಯೇ ಇದೆ."

"ಅವಳ ಶತ್ರುಗಳು ಬೊಂಬಾಯಿನಲ್ಲಿದ್ದಾರೆ. ನೀನೇ ಹೇಳುತ್ತಿದ್ದಿಯೇ ಅವಳು ಆ ಹೊಟೇಲಿನಲ್ಲಿರುವುದು ಶತ್ರುಗಳಿಗೆ ತಿಳಿದಿದೆ ಎಂದು. ಆದರೂ ನೀನು ಅವಳ ಯೋಗಕ್ಷೇಮವನ್ನು ಸರಿಯಾಗಿ ನೋಡುಕೊಳ್ಳುತ್ತಿಲ್ಲ."

"ಈ ಅಪಾದನೆಗೆ ನಾನು ಉತ್ತರ ಹೇಳಲಾರೆ. ಕಾಲಕ್ರಮೇಣ ನಿಮಗೆ ಗೊತ್ತಾಗುತ್ತದೆ. ಸ್ವಲ್ಪ ಸೂಕ್ಷ್ಮವಾಗಿ ಹೇಳುತ್ತೇನೆ ಆ ಧಾಕುವಿಗೆ ಲೀಲಾ ದೇವಿ ಬೇಕಾಗಿಲ್ಲ ಎಂದು ತೋರುತ್ತದೆ. ಅವಳು ನಾನೇ ಕೊಲೆಪಾತಕಿಯೆಂದು ಒಪ್ಪಿಕೊಂಡು ಈ ಮೊಕದ್ದಮೆ ಇಲ್ಲಿಗೆ ಮುಗಿದರೆ, ಅವನು ಆಮೇಲೆ ಈ ವಜ್ರ ವನ್ನು ಮಾರಿಕೊಂಡು ಹಣಸಂಪಾದನೆ ಮಾಡಬಹುದು."

"ಹಾಗಾದರೆ ಲೀಲಾದೇವಿಯನ್ನು ಒಪ್ಪಿಸುವಂತೆ ನಿನಗೆ ಏಕೆ ಹೇಳಿದ."

"ನಮ್ಮನ್ನು ಸಿಕ್ಕಾಪಟ್ಟೆ ಆಟ ಆಡಿಸಿ ನಮ್ಮನ್ನು ಇಲ್ಲದ ತೊಂದರೆಗೆ ಸಿಕ್ಕಿ ಹಾಕಿಸುವುದೇ ಅವನ ಉದ್ದೇಶ್ಯವಿರಬಹುದು."

—ಶಂಕರ್‌ನ ಆ ಮಾತಿಗೆ ಯಾರೂ ಉತ್ತರಕೊಡಲಿಲ್ಲ.

## ೧೦

"ನಾನೆಲ್ಲಿದ್ದೇನೆ ?"

"ಈಗ ಗಂಟೆ ಎಷ್ಟು ?"

ಮಂಚದಮೇಲೆ ಹಗ್ಗಗಳಿಂದ ಬಂಧಿಸಲ್ಪಟ್ಟು ಮಲಗಿದ್ದ ಅರುಗೇಂದ್ರ ಕಣ್ಣು ಬಿಟ್ಟತಕ್ಷಣ ಆ ಎರಡು ಪ್ರಶ್ನೆಗಳನ್ನು ಕೇಳಿದ. ಆ ಪ್ರಶ್ನೆಗಳಿಗೆ ಉತ್ತರ ಕೊಡಲು ಅಲ್ಯಾರೂ ಇರಲಿಲ್ಲ. ಎಲ್ಲೆಲ್ಲೂ ಭಯಂಕರ ಮೌನ, ಕಾರ್ಗತ್ತಲು ಅವನಿಗೆ ಕೊಂಚಕೊಂಚವಾಗಿ ಶತ್ರುಗಳು ತನ್ನನ್ನು ಬಂಧಿಸಿದ್ದು ಜ್ಞಾಪಕ ಬಂದಿತು. ಅವರು ತನ್ನನ್ನು ಈ ಕಾರ್ಗತ್ತಲು ಕೋಣೆಯಲ್ಲಿ ಹಾಕಿರುವರೆಂದು ಕೊಂಡನು. ಆಗ ಅವನಿಗೆ ತುಂಬಾ ಹಸಿವು ಬಾಯಾರಿಕೆಯಾಗಿತ್ತು.

"ನೀರು."

ಬಾಗಿಲು ತೆರೆಯಿತು.

ಕರಿಯ ಉಡುಪಿನ ಕೆಂಪು ಮುಖವಾಡದ ವ್ಯಕ್ತಿಯೊಬ್ಬ ಒಂದು ಲೋಟ ನೀರನ್ನು ಕೊಟ್ಟ.

ಅರುಗೇಂದ್ರ ಅವನು ಕೊಟ್ಟ ನೀರನ್ನು ಕುಡಿದ. ಸ್ವಲ್ಪ ಅವನ ಮನಸ್ಸಿಗೆ ತೃಪ್ತಿಯಾಯಿತು

"ಒಂದು ಸಿಗರೇಟು."

ಆ ಕೆಂಪು ಮುಖವಾಡದ ವ್ಯಕ್ತಿ ಹೊರಗೆ ಹೋಗಿ ಒಂದು ಸಿಗರೇಟನ್ನು ತಂದು ಅರುಗೇಂದ್ರನ ತುಟಿಯ ಮಧ್ಯದಲ್ಲಿಟ್ಟು ಬೆಂಕಿಕಡ್ಡಿಯನ್ನು ಗೀರಿ ಹಚ್ಚಿದ. ಅರುಗೇಂದ್ರನ ಕೈ ಹಗ್ಗಗಳಿಂದ ವಿಮುಕ್ತವಾಯಿತು. ಅವನು ಎರಡು ದಂ ಸಿಗರೇಟು ಸೇದಿದ.

"ಹಸಿವು."

ಕೆಂಪು ಮುಖವಾಡದ ವ್ಯಕ್ತಿ ಆ ಕೊಠಡಿಯಲ್ಲಿದ್ದ ಒಂದು ಸ್ವಿಚ್ಚನ್ನು ಒತ್ತಿದ. ಹಸಿರು ದೀಪ ಆ ಕೊಠಡಿಯಲ್ಲಿದ್ದ ಗಾಢಾಂಧಕಾರವನ್ನು ಸ್ವಲ್ಪ ಕಡಿಮೆಮಾಡಿತು.

ಕೆಂಪು ಮುಖವಾಡದ ವ್ಯಕ್ತಿ ಒಳಗಿನಿಂದ ಒಂದು ತಟ್ಟೆಯನ್ನು ತಂದ. ಆ ತಟ್ಟೆಯಲ್ಲಿ ಟೋಸ್ಟ್, ಬ್ರೆಡ್, ಹಣ್ಣು, ಹಾಲು ಇದ್ದಿತು. ಅರುಗೇಂದ್ರ ತಟ್ಟೆಗೆ ಕೈಹಾಕಿದ.

ಅಲ್ಲಿದ್ದ ಆಹಾರವನ್ನು ತಿಂದ. ಆ ಮುಖವಾಡದ ವ್ಯಕ್ತಿಯಿಂದ ಮತ್ತೊಂದು ಸಿಗರೇಟನ್ನು ತೆಗೆದುಕೊಂಡು ಹಚ್ಚಿದ.

ಆಗ ಅವನಿಗೆ ಸಮಾಧಾನವಾಗಿ, ನಡೆದುಹೋದ ಘಟನೆಗಳು ಒಂದೊಂದಾಗಿ ಸ್ಮೃತಿಪಟಲದ ಮೇಲೆ ಬಂದಿತು.

ಕೊಠಡಿಯಲ್ಲಿದ್ದ ಬಣ್ಣದ ದೀಪ ಆರಿ, ಪ್ರಕಾಶಮಾನವಾದ ಬಿಳಿಯ ದೀಪ ಹತ್ತಿತು.

ಉಲ್ಲನ್ ಸೂಟು ಧರಿಸಿದ್ದ ಕೆಂಪು ಮುಖವಾಡದ ವ್ಯಕ್ತಿ ಬಹಳ ಠೀವಿಯಿಂದ ಆ ಕೊಠಡಿಯನ್ನು ಪ್ರವೇಶಿಸಿತು. ಅವನು ಬಂದ ಠೀವಿಯಿಂದ, ಅವನೇ ಚೋರಮುಖಂಡನೆಂದು ಅರುಗೇಂದ್ರ ಊಹಿಸಿದ. ಬಹುಮಟ್ಟಿಗೆ ಅವನ ಊಹೆ ಸತ್ಯವಾಗಿತ್ತು.

ಹೌದು—ಆ ಭೂತಾಕಾರ ವ್ಯಕ್ತಿಯೇ ಸುಪ್ರಸಿದ್ಧ ಬೊಂಬಾಯಿ ದಗಾಕೋರ. ಜನತಾ ಎಕ್ಸ್‌ಪ್ರೆಸ್ಸಿನಲ್ಲಿ ಮೋಹನ್‌ಚಂದ್‌ನನ್ನು ಕೊಂದು "ಜೈಪ್ರಕಾಶ್" ವಜ್ರವನ್ನು ಅಪಹರಿಸಿ, ಏನೂ ಅರಿಯದ ಮುಗ್ಧೆ ಲೀಲಾದೇವಿಯ ಮೇಲೆ ಮೋಡಿ ಪ್ರಯೋಗಮಾಡಿ ಅವಳನ್ನು ಕ್ಯಾರೇಜಿನಿಂದ ಇಳಿಸಿ ಓಡಿಸಿದ. ಪೋಲೀಸಿನವರು ಓಡಿಹೋದ ಆ ಹೆಣ್ಣೇ ಕೊಲೆಪಾತಕಿಯೆಂದು ಅವಳನ್ನು ಶೋಧಿಸುತ್ತಿದ್ದರು. ಶಂಕರ್‌ರವರ ಮನೆಗೆ ಪ್ರವೇಶಿಸಿ ಅರುಗೇಂದ್ರನನ್ನು ಬಂಧಿಸಿಕೊಂಡು ಕರೆತಂದಿದ್ದ. ಅವನು ಮಹಾ ಕ್ರೂರಿ. ಕೊಲೆ ಎಂಬುದು ಅವನಿಗೆ ಹುಡುಗಾಟ. ಹಣದಾಹದೊಂದಿಗೆ ಅವನಿಗೆ ಕಾಮದಾಹವು ಇದ್ದಿತು. ಅವನ ಕಾಮದಾಹದ ಕಣ್ಣಿನ ದೃಷ್ಟಿ ಸುಂದರಿಯಾದ ಲೀಲಾದೇವಿಯ ಮೇಲಿದ್ದಿತು. ಅವನನ್ನು ಮೋಸಪಡಿಸಲು ಬಂದ ಪಂಚರಂಗಿ ಬೊಂಬಾಯಿ

ವಾಲ ಅವನ ಕುತ್ತಿಗೆಯನ್ನರ್ಪಿಸಿದ್ದ. ಅಬ್ಬ! ಭಯಂಕರ ಕೊಲೆಗಳು ಅವನಿಂದ ನಡೆದಿದ್ದವು.

"ನಮಸ್ಕಾರ! ಸುಪ್ರಸಿದ್ಧ ಮೇಧಾವಿ ಪತ್ತೇದಾರ ಅರುಗೇಂದ್ರ ವಿಜಯ ಬಾಬುಗಳಿಗೆ."

ಅತ್ಯಂತ ವ್ಯಂಗ್ಯವಾಗಿ ಅವನಾಡಿದ ಮಾತಿಗೆ ಅರುಗೇಂದ್ರನಿಗೆ ವಿಪರೀತ ಕೋಪ ಬಂದಿತು. ಆದರೆ ಅದು ಕೋಪಕ್ಕೆ ಸಮಯವಾಗಿರಲಿಲ್ಲ. ಅರಗೇಂದ್ರ ಅವನ ಮಾತಿಗೆ ಪ್ರತ್ಯುತ್ತರವನ್ನು ಕೊಡುವ ತೊಂದರೆಯನ್ನೇ ತೆಗೆದುಕೊಳ್ಳಲಿಲ್ಲ. ಮೌನವಾಗಿ ಕುಳಿತಿದ್ದ.

"ನಿನ್ನನ್ನು ಬಿಡಿಸಿಕೊಳ್ಳಲು ನಿನ್ನ ಗೆಳೆಯ ಹಾಗೂ ಸುಪ್ರಸಿದ್ಧ ಪತ್ತೇದಾರ ಬೊಂಬಾಯಿನವರೆಗೂ ಪಾದ ಬೆಳೆಸಿದ್ದಾನೆ. ಆದರೆ ಅವನಿಂದ ಅದು ಸಾಧ್ಯವಿಲ್ಲ. ಅಂಥ ಸಾಹಸ, ಬುದ್ಧಿವಂತಿಕೆಗಳು ಅವನ ಬಳಿ ಇದ್ದರೆ ಬಿಡಿಸಿಕೊಂಡು ಹೋಗಲಿ."

ಅರುಗೇಂದ್ರನ ಸಹನೆ ಮುರಿಯಿತು. ಅವನು ತಡೆದುಕೊಂಡರೂ, ಅವನ ಬಾಯಿನಿಂದ ತುಟಿಮೀರಿದ ಮಾತುಗಳು ಹೊರಬಂದವು.

"ಇಂದಲ್ಲ ನಾಳೆ ಎಂದಾದರೊಂದು ದಿನ ಶಂಕರ್ ನಿನ್ನನ್ನು ಹಿಡಿದೇ ಹಿಡಿಯುತ್ತಾನೆ."

"ಹ್ಹಾ....ಅಹ್ಹಾ....ಹ್ಹ!

"ನಾನು ಯಾವಾಗಲೂ ಅವನ ಜೊತೆಯಲ್ಲಿಯೇ ಇರುತ್ತೇನೆ. ಕೆಲವು ಸಂದರ್ಭಗಳಲ್ಲಿ ಅವನೊಡನೆ ಮಾತನಾಡಿದ್ದೇನೆ ಎಂದರೆ ನಿನಗೆ ಆಶ್ಚರ್ಯವಾಗಬಹುದು. ಶಂಕರ್ ಎಲ್ಲೋ ಬಚ್ಚಿಟ್ಟಿದ್ದ ಲೀಲಾದೇವಿಯನ್ನು ತನ್ನಷ್ಟಿಗೆ ತಾನೇ ಹೊರಗೆ ಬರುವಂತೆ ಮಾಡಬೇಕೆಂದು ಆಲೋಚಿಸಿ ನಿನ್ನನ್ನು ಬಂಧಿಸಿದೆ. ಶಂಕರ್ ಅವಳನ್ನು ಬೆಂಗಳೂರಿನಿಂದ ಬೊಂಬಾಯಿಗೆ ಕರೆದುಕೊಂಡು ಬಂದಿದ್ದಾನೆ. ಅವಳು ನನಗೆ ಸಿಗುತ್ತಾಳೆ. ಅವಳು ನನ್ನೊಡನೆ ಇರಲು ಹಿಂದೆಗೆಯಬಹುದು. ಆದರೆ...."

ತಕ್ಷಣ ದೀಪಗಳು ಆರಿದವು.

ಆ ಚೋರನಾಯಕ ತನ್ನ ಮುಖವಾಡವನ್ನು ಕಿತ್ತೊಗೆದ. ಕಾರ್ಗತ್ತಲಿನಲ್ಲಿ ಅವನ ಮುಖ ಕಾಣಿಸಲಿಲ್ಲ. ಆದರೆ....ಆ ಎರಡು ಕಣ್ಣುಗಳು....ಅಬ್ಬಾ

....ಅದು ಭಯಂಕರ ಕ್ರೋಧದ ಕೆಂಪುಕಣ್ಣುಗಳಲ್ಲಿ....ಅದು ಅರುಗೇಂದ್ರನಿಗೆ ಭಯವನ್ನುಂಟು ಮಾಡುತ್ತಿರಲಿಲ್ಲ....ಆದರೆ ಆ ಕಣ್ಣುಗಳು....ಗಾಜಿನ ಗೋಲಿಯಂತೆ ಮಿಂಚುತ್ತಿದ್ದುವು. ಆ ಎರಡು ನೀಲಿ ಕಣ್ಣುಗಳು ಅತ್ಯಂತ ಭಯಂಕರವಾಗಿದ್ದುವು. ಆ ಕಾರ್ಗತ್ತಲಿನಲ್ಲಿ ಆ ಎರಡು ಕಣ್ಣುಗಳು ಮಿಂಚುತ್ತಿದ್ದುವು."

"ನೋಡಿದೆಯಾ ಅರುಗೇಂದ್ರ ?"

ಅರುಗೇಂದ್ರ ನೋಡುತ್ತಲೇ ಇದ್ದ.

ಆ ಚೋರ ಮುಖಂಡ, ಬೊಂಬಾಯಿನ ದಗಾಕೋರ ಮತ್ತೆ ಕೆಂಪು ಮುಖವಾಡವನ್ನು ಧರಿಸಿದ.

ದೀಪಗಳು ಮತ್ತೆ ಹತ್ತಿಕೊಂಡುವು. ಅವನು ಹಿಪ್ನಾಟಿಸ್ಟ್ ಎಂಬ (ಮೋಡಿಗಾರ—ಮಾಮಾಚಾರಿ) ವಿಷಯ ಅರುಗೇಂದ್ರನಿಗೆ ಚೆನ್ನಾಗಿ ಅರ್ಥವಾಯಿತು.

"ನಾನು ಆ ದಿನ ರೈಲಿನಲ್ಲಿ ಕೊಲೆ ಮಾಡಿದೆ. ಆ ವಜ್ರವನ್ನು ಅಪಹರಿಸಿ, ಮೋರ್ಹಚಂದ್‌ನನ್ನು ಕೊಲ್ಲದೆ ಬಿಟ್ಟುಬಿಟ್ಟಿದ್ದರೆ, ಅವನು ವಜ್ರ ಕಳುವಾಗಿದೆ ಎಂದು ಕಂಪ್ಲೆಂಟ್ ಕೊಡುತ್ತಿದ್ದ. ಆದರೆ ಈಗ ಆ ರೀತಿ ಕಂಪ್ಲೆಂಟ್ ಕೊಡಲು ಅವನಿಲ್ಲ. ವಜ್ರಕ್ಕೋಸ್ಕರ ಈ ಕೊಲೆಯಾಗಿದೆ ಎಂಬುದು ಎಂದಾದರೂ ಒಂದು ದಿನ ಎಲ್ಲರಿಗೂ ತಿಳಿಯುತ್ತಿತ್ತು. ಅದು ತಿಳಿಯುವಷ್ಟರಲ್ಲೇ ವಜ್ರವನ್ನು ಮಾರಾಟ ಮಾಡಬೇಕೆಂದಿದ್ದೆ. ಅದಕ್ಕಾಗಿ ಬೊಂಬಾಯಿಮಾಲನನ್ನು ನೇಮಕಮಾಡಿದೆ. ಅವನು ಗುರುವಿಗೆ ತಿರುಮಂತ್ರ ಹೇಳಲು ಹೋಗಿ ನನ್ನ ಕತ್ತಿಗೆ ಅವನ ಕುತ್ತಿಗೆಯನ್ನು ಕೊಟ್ಟ. ಆ ಕೊಲೆಯನ್ನು ಮುಚ್ಚಿಡಲು ನಾನು ಶವಗಳನ್ನು ಸಮುದ್ರಕ್ಕೆ ಎಸೆದೆ. ಆದರೆ ಶಂಕರ್ ಆ ಶವಗಳನ್ನು ಕಂಡುಹಿಡಿದುಬಿಟ್ಟ. ಅವನು ನನ್ನ ದಾರಿಗೆ ಅಡ್ಡ ಬರುತ್ತಿದ್ದಾನೆ. ಅವನ ತಲೆಯನ್ನು ಅತಿಶೀಘ್ರದಲ್ಲಿಯೇ ಕತ್ತರಿಸಿಹಾಕುತ್ತೇನೆ. ಇನ್ನೊಂದು ದಿನ ನೀನು ಏನು ಕೇಳಿದರೂ ಕೊಡುತ್ತೇನೆ. ನಿನ್ನ ಜೀವನದ ಕೊನೆಯ ಬಯಕೆಯನ್ನು ತೀರಿಸಿ ನಿನ್ನನ್ನು ಸ್ವರ್ಗಕ್ಕೆ ಕಳುಹಿಸುತ್ತೇನೆ. ನೀನು ಅಲ್ಲಿ ಹೋಗಿ ಸುಖವಾಗಿರು.

"ನನ್ನ ಬಳಿಗೆ ಬಂದ ಯಾರೂ ಜೀವಸಹಿತವಾಗಿ ಹೋಗಿಲ್ಲ. ನಿನ್ನ

ಮಾನ್ಯ ಮಿತ್ರ ಸುಪ್ರಸಿದ್ಧ ದತ್ತೇದಾರ ಶಂಕರ್‌ಗೆ ಒಂದು ಕಾಗದ ಬರೆಯುತ್ತೇನೆ. ಹತ್ತು ಸಾವಿರ ರೂಪಾಯಿ ಅವನು ನನಗೆ ಕೊಟ್ಟರೆ ನಿನ್ನನ್ನು ಬಿಟ್ಟು ಬಿಡುತ್ತೇನೆ. ಅವನು ಈ ವ್ಯವಹಾರದಲ್ಲಿ ಯಾವುದಾದರೂ ರೀತಿಯಲ್ಲಿ ನನ್ನನ್ನು ಮೋಸಪಡಿಸಿದರೆ ನಿಮ್ಮಿಬ್ಬರ ತಲೆಯನ್ನು ಹಾರಿಸುತ್ತೇನೆ."

ಆ ಚೋರ ಶಿಖಾಮಣಿಯ ಮಾತುಗಳನ್ನು ಅರುಗೇಂದ್ರ ವಿಧಿಯಿಲ್ಲದೆ ಸಹನೆಯಿಂದ ಕೇಳುತ್ತಿದ್ದ. ಅದರ ಹೊರತು ಅವನಿಗೆ ಬೇರೆ ಯಾವ ದಾರಿಯೂ ಇರಲಿಲ್ಲ. ಮುಳ್ಳಿನ ಮೇಲೆ ಬಿದ್ದ ಬಟ್ಟೆಯನ್ನು ಬಹಳ ಹುಷಾರಿನಿಂದ ತೆಗೆದುಕೊಳ್ಳಬೇಕು. ಅಪಾಯಕಾರಿಯಾದ ಪರಿಸ್ಥಿತಿಯನ್ನು ಅತ್ಯಂತ ಚಾತುರ್ಯ ಧೈರ್ಯದಿಂದ ಎದುರಿಸಬೇಕು. ಅರುಗೇಂದ್ರನಿಗೆ ಹಿಪ್ನಾಟಿಸಮ್ ಚೆನ್ನಾಗಿ ಗೊತ್ತಿತ್ತು. ಆ ಚೋರಾಗ್ರೇಸರನ ಮೋಡಿವಿದ್ಯೆ ಇವನ ಮುಂದೆ ನಡೆಯಲು ಸಾಧ್ಯವಿರಲಿಲ್ಲ.

"ಒಳಗೆ ಬರಲಾ ?"

—ಯಾವುದೋ ಒಂದು ವ್ಯಕ್ತಿ ಹೊರಗಡೆಯಿಂದ ಒಳಗೆ ಬರಲು ಚೋರಾಗ್ರೇಸರನ ಅಪ್ಪಣೆ ಕೇಳಿದ.

"ಬಾ."

ಅದೇ ಭಯಂಕರ ಕರಿಯ ಉಡುಪಿನ ಕೆಂಪು ಮುಖವಾಡದ ಮತ್ತೊಂದು ಕುಳ್ಳ ವ್ಯಕ್ತಿ ಒಳಗೆ ಬಂದಿತು.

"ಏನು ಕಾಳ ?"

"ಅಲ್ಲಿಗೆ ಹೋಗಿದ್ದೆ."

"ಬಾಂಬೆ ಕೆಫೆಗೆ ತಾನೆ ?"

"ಹೌದು."

"ಅವಳು ಅಲ್ಲಿಯೋ ಇದ್ದಳೋ ?"

"ಇದ್ದಳು."

"ಶಂಕರ್‌ಗೆ ಒಂದು ಕಾಗದ ಬರೆದೆಯೋ ?"

"ಬರೆದೆ."

"ನೀವು ಲೀಲಾದೇವಿಯನ್ನು ಗೇಟ್ ವೇ ಆಫ್ ಇಂಡಿಯಾದ ಬಳಿ ಕರೆದುಕೊಂಡು ಬಂದು ನಮಗೆ ವಶಪಡಿಸಬೇಕೆಂದು ಹೇಳಿದ್ದೆವು. ಆದರೆ ಆ

ತೊಂದರೆ ತಮಗೇಕೆಂದು ನಾವೇ ಬೊಂಬಾಯಿ ಕೆಫೆಯಿಂದ ಲೀಲಾದೇವಿಯನ್ನು ಕರೆದುಕೊಂಡು ಬಂದಿದ್ದೇವೆ. ನಾವು ಸಮುದ್ರದಲ್ಲಿ ಹಾಕಿದ ಶವಗಳನ್ನು ತಾವು ತೆಗೆದಿರಿ. ನಾವು ಎಷ್ಟೇ ಎಚ್ಚರಿಕೆಯನ್ನು ಕೊಟ್ಟರೂ, ತಾವು ನಮ್ಮ ಮಾತನ್ನು ತೆಗೆದುಹಾಕಿ ನಮ್ಮನ್ನು ಹಿಡಿಯಲು ಪ್ರಯತ್ನಿಸುತ್ತಿದ್ದೀರಿ. ತಾವು ಸಿಂಹದ ಗುಹೆಗೆ ಪ್ರವೇಶಿಸಲು ಪ್ರಯತ್ನಿಸುತ್ತಿದ್ದೀರಿ. ಹಾವಿನ ಹುತ್ತದಲ್ಲಿ ಕೈಹಾಕುವ ಸಾಹಸ ಕಾರ್ಯಕ್ಕೆ ತೊಡಗಿದ್ದೀರಿ. ಅದು ಅಸಾಧ್ಯ, ಅಂತೆಯೇ ಅಪಾಯ—ನಮ್ಮನ್ನು ಹಿಡಿಯುವ ಯೋಚನೆಯನ್ನು ಬಿಟ್ಟು ಊರಿಗೆ ಸೇರಿಕೊಂಡರೇ ಸರಿ, ಇಲ್ಲದಿದ್ದರೆ ನಮ್ಮ ಕತ್ತಿಗೆ ತಮ್ಮ ರುಂಡವನ್ನು ರ್ಪಿಸಬೇಕಾಗುತ್ತದೆ. ತಮ್ಮ ಜೂನಿಯರ್ ಅರುಗೇಂದ್ರ ನಮ್ಮ ಮುಷ್ಟಿಯಲ್ಲಿದ್ದಾನೆಂಬುದು ತಮಗೆ ನೆನಪಿರಲಿ. ಯಾವ ಕ್ಷಣದಲ್ಲಿ ಬೇಕಾದರೂ ನಾವು ಅವನ ತಲೆಯನ್ನು ಹಾರಿಸಬಹುದು. ತಾವು ನಮ್ಮ ದಾರಿಗೆ ಅಡ್ಡ ಬಂದರೆ, ನಾವು ಅವನ ತಲೆಯನ್ನು ಕತ್ತರಿಸುತ್ತೇವೆ. ತಮ್ಮ ಗೆಳೆಯನ ಪ್ರಾಣಕ್ಕೆ ತಾವೇ ಸಂಚಕಾರ ತಂದಂತಾಗುತ್ತದೆ. ತಾವು ನಮ್ಮನ್ನು ಹಿಡಿಯುವ ಯೋಚನೆಯನ್ನು ಬಿಟ್ಟು, ಹತ್ತು ಸಾವಿರ ರೂಪಾಯಿಗಳನ್ನು ನಮಗೆ ಕೊಡಲು ಒಪ್ಪಿದರೆ ಅವನನ್ನು ಬಿಟ್ಟುಬಿಡುತ್ತೇವೆ."

"ಈ ರೀತಿ ಪತ್ರ ಬರೆದಿದ್ದೇನೆ."

"ಭೇಷ್ ಕಾಳ! ಸಕಲ ಕಾರ್ಯಗಳನ್ನೂ ಸಮರ್ಪಕವಾಗಿ ಮಾಡಿದ್ದೀಯಾ. ಆ ಸುಂದರೀಮಣಿ ಎಲ್ಲಿದ್ದಾಳೆ?"

"ತಮ್ಮ ಕೊಠಡಿಯಲ್ಲಿ ಕೂಡಿಸಿದ್ದೇನೆ."

"ನಮಸ್ಕಾರ, ಪತ್ತೇದಾರರೇ! ಬರುತ್ತೇನೆ."

ಆ ಭಯಂಕರ ಚೋರಾಗ್ರೇಸರ ಅಲ್ಲಿಂದ ಕಾಲ್ತೆಗೆದ.

## ೧೧

ಎರಡು ಕಣ್ಣುಗಳು !

ಆ ಕೆಂಪು ಮುಖವಾಡದ ತೂತಿನಿಂದ ಆ ಕಣ್ಣುಗಳು ಕಾಣುತ್ತಿದ್ದುವು!

ಅದೇ ಕಣ್ಣುಗಳನ್ನು ಲೀಲಾದೇವಿ ಆ ದಿನ ಜನತಾ ಎಕ್ಸ್‌ಪ್ರೆಸ್ಸಿನಲ್ಲಿ ನೋಡಿದ್ದಳು !

ಆ ಕಣ್ಣುಗಳು ಅವಳಿಗೆ ಆ. ದಿನ ನಡೆದ ಘಟನೆಗಳನ್ನು ತೆರೆತೆರೆಯಾಗಿ ನೆನಪಿಗೆ ತಂದಿತು.

ಅವಳು ಆ ಕ್ಯಾರೇಜಿನಲ್ಲಿ ಕುಳಿತುಕೊಂಡು ಬೊಂಬಾಯಿನಿಂದ ಬೆಂಗಳೂರಿಗೆ ಬರುತ್ತಿದ್ದಳು. ಆ ಕ್ಯಾರೇಜಿನಲ್ಲಿ ಒಬ್ಬ ಶ್ರೀಮಂತ ಕುಳಿತಿದ್ದ.

ಇವಳು ಆ ಶ್ರೀಮಂತನ ಕಡೆಗೆ ಅನೇಕ ಬಾರಿ ನೋಡಿದಳು. ಅವನ ವಯಸ್ಸು ಸುಮಾರು ನಲವತ್ತೈದಿರಬಹುದು.

ಅವನ ಕೈಲಿದ್ದ ಉಂಗುರಗಳು, ಅವನ ಮುಖದಲ್ಲಿದ್ದ ಶ್ರೀಮದ್ ಗಾಂಭೀರ್ಯ, ಅವರು ಆಗರ್ಭ ಶ್ರೀಮಂತರು ಎಂಬುದನ್ನು ಸೂಚಿಸುತ್ತಿತ್ತು.

ಮತ್ತೊಬ್ಬನ ವಯಸ್ಸು ಐವತ್ತಾರರ ಹತ್ತಿರ ಇರಬಹುದು. ಆ ಮುದುಕನ ಕಣ್ಣುಗಳು ಸಾಮಾನ್ಯ ಮುದುಕರ ಶಾಂತ ನಯನಗಳಂತಿರಲಿಲ್ಲ. ಭಯಂಕರವಾದ ಅಗಲವಾದ ಕೆಂಗಣ್ಣುಗಳು. ನಯನ ಭಯಂಕರವಾದ ಆ ಕೆಂಪು ಕಣ್ಣುಗಳನ್ನು ಕಂಡು ಲೀಲಾದೇವಿಗೆ ತುಂಬಾ ಹೆದರಿಕೆಯಾಯಿತು.

ಅವಳು ಕಕ್ಕಸಿನ ಕಡೆ ಹೋಗಿ ಬಾಗಿಲು ತೆಗೆದಾಗ, ಅಲ್ಲಿ ಗುಂಡಾಗಳಿದ್ದರು. ಅವರು ಉಸಿರು ಜೋರಾಗಿ ಬಿಟ್ಟರೆ ಗುಂಡು ಹಾರಿಸಿ ಕೊಲ್ಲುವುದಾಗಿ ಉಸುರಿದರು. ಅವರ ಮುಖವನ್ನು ಲೀಲಾದೇವಿ ಗುರುತಿಸಲಾಗಲಿಲ್ಲ. ಕಾರಣ,

ಅವರು ಬಾಯಿಗೆ ಕರ್ಚೀಫನ್ನು ಕಟ್ಟಿಕೊಂಡಿದ್ದರು. ಅವರ ಹಣೆ ಹ್ಯಾಟಿನಿಂದ ಮುಚ್ಚಿದ್ದಿತು. ಅವರು ರಿವಾಲ್ವರ್ ಧಾರಿಗಳಾಗಿದ್ದರು. ಅದರಲ್ಲಿ ಒಬ್ಬನದು ನೀಲಿಯ ಕಣ್ಣುಗಳು. ಗಾಜಿನ ಗೋಲಿಯಂಥ ಕಣ್ಣುಗಳು ಪಿಳಪಿಳನೆ ಮಿಂಚುತ್ತಿದ್ದುವು ಅವನ ಕಣ್ಣುಗಳು ಲೀಲಾದೇವಿಯನ್ನೇ ನೋಡುತ್ತಿದ್ದುವು.

ಲೀಲಾದೇವಿಗೆ ಆ ಭಯಂಕರ ನಯನಗಳನ್ನು ಹೆಚ್ಚು ಹೊತ್ತು ನೋಡಲಾಗಲಿಲ್ಲ. ತನ್ನ ದೃಷ್ಟಿಯನ್ನು ತಿರುಗಿಸಿದಳು. ಆ ವಿಚಿತ್ರ ಭಯಂಕರ ಪರಿಸ್ಥಿತಿಯಿಂದ ಅವಳು ಬಹಳ ಹೆದರಿದ್ದಳು. ಅವಳ ಕೋಮಲ ದೇಹ ಅತ್ಯಂತ ಭಯದಿಂದ ಕಂಪಿಸುತ್ತಿತ್ತು.

ಒಬ್ಬ ರಿವಾಲ್ವರ್ ಧಾರಿ ಗೂಂಢಾ ಹೇಳಿದ—

"ನೀನು ನನ್ನ ಕಣ್ಣುಗಳನ್ನೇ ನೋಡುತ್ತಿರು."

ಅವಳು ಭಯದಿಂದ ಗಡಗಡನೆ ನಡಗುತ್ತಿದ್ದಳು. ಅವಳು ಅವನ ಮಾತಿನಂತೆ ಅವನ ನಯನಗಳನ್ನು ನೋಡುತ್ತಿರಲಿಲ್ಲ, ಅವಳಿಗೆ ತಲೆ ಎತ್ತಲು ಆಗಲಿಲ್ಲ.

ಅವನು ಮತ್ತೊಮ್ಮೆ ಗರ್ಜಿಸಿದ. ಅತ್ಯಂತ ಸಣ್ಣ ಧ್ವನಿಯಲ್ಲಿ ಮಾತನಾಡಿದ—

"ನಾವು ಒಬ್ಬ ವ್ಯಕ್ತಿಯನ್ನು ಖೂನಿ ಮಾಡಬೇಕು."

"ಹ್ಹಾ!"

ಖೂನಿ ಎಂಬ ಹೆಸರನ್ನು ಕೇಳಿದ ತಕ್ಷಣ ಲೀಲಾದೇವಿಯ ಮುಖದ ಮೇಲೆಲ್ಲಾ ಬೆವರು ಹನಿಗಳು ಮೂಡಿದವು. ಅವಳಿಗೆ ಬಹಳ ಹೆದರಿಕೆಯಾಯಿತು. ಅವಳ ತಲೆ ಸುತ್ತಲಾರಂಭಿಸಿತು. ಅವಳು ಬಹಳ ಕಷ್ಟಪಟ್ಟು ತನ್ನ ತಲೆಯನ್ನು ಎತ್ತಿದಳು. ಆ ನೀಲಿ ನಯನಗಳು ಅವಳನ್ನೇ ನೋಡುತ್ತಿದ್ದವು.

"ಹಾಗೆಯೇ ನನ್ನ ಕಣ್ಣುಗಳನ್ನು ನೋಡುತ್ತಿರು. ಇಲ್ಲದಿದ್ದರೆ ಗುಂಡು ಹಾರಿಸಿ ಕೊಂದುಬಿಡುತ್ತೇನೆ."

ಆ ವ್ಯಕ್ತಿ ಪಿಸುಗುಟ್ಟಿದ.

ಆ ವ್ಯಕ್ತಿಯ ಕೈಲಿದ್ದ ರಿವಾಲ್ವರಿನ ಗುರಿ ಅವಳ ಎದೆಗೆ ನೇರವಾಗಿತ್ತು.

ಅವಳಿಗರಿವಿಲ್ಲದೆಯೇ ಅವಳ ತಲೆ ಬಗ್ಗಿತು.

ಆ ವ್ಯಕ್ತಿ ಅವಳ ಗಡ್ಡವನ್ನು ಹಿಡಿದು ತಲೆಯನ್ನು ಮೇಲಕ್ಕೆತ್ತಿದ. ಆ ನೀಲಿಯ ಕಣ್ಣಿನ ದೃಷ್ಟಿ ಅವಳ ಮುಖದ ಮೇಲೆ ಕೆಲವು ನಿಮಿಷಗಳು ಬಿತ್ತು.

ಆಮೇಲೇನಾಯಿತು ?

—ಆಮೇಲೆ ಮೋಹನ್‌ಚಂದ್‌ನನ್ನು ಕೊಂದು ಅಮೂಲ್ಯವಾದ "ಜೈ ಪ್ರಕಾಶ್" ವಜ್ರದ ಅಪಹಾರವಾಯಿತು.

ಕೊಲೆಯಾದಮೇಲೆ ಆ ವ್ಯಕ್ತಿ ಚೈನು ಎಳೆದ. ರೈಲು ನಿಂತಿತು.

"ನೀನು ರೈಲಿನಿಂದ ಇಳಿದು ಓಡಿಹೋಗಿ ಆ ಕಾರಿನಲ್ಲಿ ಕುಳಿತುಕೋ."

—ಆ ವ್ಯಕ್ತಿ ಲೀಲಾದೇವಿಗೆ ಹೇಳಿದ.

ಅವನ ಮಾತಿನಂತೆ ಅವಳು ರೈಲು ನಿಂತ ತಕ್ಷಣ ಓಡಿಹೋಗಿ ಕಾರಿನಲ್ಲಿ ಕುಳಿತುಕೊಂಡಳು.

ರೈಲಿನಿಂದ ಇಳಿದ ಜನರು ಆ ಯುವತಿ ಕಾರಿನಲ್ಲಿ ಕುಳಿತುದನ್ನು ನೋಡಿದರು. ಆಮೇಲೆ "ಕೊಲೆ" ಎಂಬ ಕೂಗಿನಶಬ್ದ ಒಂದು ಕ್ಯಾರೇಜಿನಿಂದ ಬಂದಿತು. ಜನ ಆ ಕಡೆ ನುಗ್ಗಿದರು.

ಆ ಗಲಾಟೆಯಲ್ಲಿ ಮೋಹನ್‌ಚಂದ್‌ನನ್ನು ಕೊಲೆಮಾಡಿದ ಗೂಂಢಾಗಳು ಸೇರಿಕೊಂಡರು.

ಆಮೇಲೆ ?

ಅವಳು ವಿಲ್ಸನ್‌ಗಾರ್ಡನ್ ಬಳಿ ಚಾಕಚಕ್ಯತೆಯಿಂದ ಆ ಗೂಂಢಾಗಳಿಂದ ತಪ್ಪಿಸಿಕೊಂಡು, ಅಲ್ಲಿಂದ ಪತ್ತೇದಾರ್ ಶಂಕರ್‌ನ ಬಳಿ ಬಂದಳು.

"ಕೊಲೆಪಾತಕಿ ನಾನಲ್ಲ" ಎಂದು ಹೇಳಿದಳು.

ಶಂಕರ್ ಅವಳಿಗೆ ಅಭಯವನ್ನು ಕೊಟ್ಟು ಮೊಕದ್ದಮೆಯಲ್ಲಿ ಮುಂದುವರೆದ.

ಆಮೇಲೆ ?

ಅವಳನ್ನು ಬೊಂಬಾಯಿಗೆ ಕರೆದುಕೊಂಡು ಬಂದ. ಗೂಂಢಾಗಳು ಮತ್ತೆ ಅವಳನ್ನು ಹಿಡಿದುಕೊಂಡು ಹೋದರು. ಶಂಕರ್ ಏಕೆ ಅವಳ ವಿಷಯದಲ್ಲಿ ಉದಾಸೀನನಾದ ? ಅದು ಅರ್ಥವಾಗದ ಸಮಸ್ಯೆ.

—ಆ ದಿನ ರೈಲಿನಲ್ಲಿ ಕಂಡ ಕಣ್ಣುಗಳೇ ಮತ್ತೆ ಅವಳನ್ನು ನೋಡು

ತ್ತಿದ್ದವು. ತನ್ನನ್ನೇ ದೃಷ್ಟಿಸಿ ನೋಡುತ್ತಿದ್ದ ಆ ನೀಲಿಯ ನಯನಗಳು ನಡೆದು ಹೋದ ಘಟನೆಗಳನ್ನು ಅವಳ ಸ್ಮೃತಿಪಟಲದ ಮೇಲೆ ತಂದವು.

"ನನ್ನನ್ನೇ ನೋಡು ಲೀಲಾ."

ತಲೆ ಬಗ್ಗಿಸಿ ದೃಷ್ಟಿ ಬದಲಾಯಿಸಲು ಪ್ರಯತ್ನಪಟ್ಟು ವಿಫಲಳಾದ ಲೀಲಳು ಆ ನಯನಗಳನ್ನೇ ನೋಡುತ್ತಿದ್ದಳು.

ಅವಳಿಗೆ, ತಾನೆಲ್ಲಿದ್ದೇನೆ? ಎದುರಿಗೆ ಕುಳಿತಿರುವ ವ್ಯಕ್ತಿ ಯಾರು? ನಾನೇಕೆ ಅವನನ್ನೇ ನೋಡುತ್ತಿದ್ದೇನೆ? ಪ್ರತಿಯೊಂದು ವಿಚಾರಗಳೂ ಅವಳ ಸ್ಮೃತಿಯಿಂದ ಮರೆಯಾಗುತ್ತಾ ಬಂದಿತು.

"ಎಲ್ಲವನ್ನೂ ಮರೆತುಬಿಡು. ಮರೆತುಬಿಡು ಲೀಲಾ, ಈ ಜಗತ್ತಿನೊಂದಿಗೆ ನಿನಗಿರುವ ಸಕಲ ಸಂಬಂಧವನ್ನೂ ಮರೆತುಬಿಡು."

—ಆ ಎದುರಿಗೆ ಕುಳಿತಿದ್ದ ಹಿಪ್ನಾಟಿಸ್ಟ್ (ಮೋಸಗಾರ) ತನ್ನ ಹಿಪ್ನಾಟಿಸಮ್ ಸರಿಯಾಗಿ ಕೆಲಸ ಮಾಡಿದೆಯೋ ಎಂದು ಪರೀಕ್ಷಿಸಿದ.

"ಏಳು ಲೀಲಾ."

ಲೀಲಾದೇವಿ ಎದ್ದು ನಿಂತುಕೊಂಡಳು.

"ಕುಳಿತುಕೋ ಲೀಲಾ."

ಕುಳಿತುಕೊಂಡಳು.

"ಕೊಂಚ ನಗು ಲೀಲಾ."

ಲೀಲಾದೇವಿಯ ಮುಂಕುಮುಖಾರವಿಂದ ನಗೆಯನ್ನು ಸೂಸಿತು.

"ಬೀರು ಕುಡಿ."

ಅವನು ಬಾಟಲಿನಿಂದ ಬೀರನ್ನು ಗ್ಲಾಸಿಗೆ ಬಗ್ಗಿಸಿ ಗ್ಲಾಸನ್ನು ಅವಳ ಕೈಲಿ ಕೊಟ್ಟ. ಗ್ಲಾಸನ್ನು ತುಟಿಯ ತನಕ ತೆಗೆದುಕೊಂಡು ಹೋಗಿ, ಅವನ ಮುಖವನ್ನು ನೋಡಲಾರಂಭಿಸಿದಳು.

"ಕುಡಿ ಲೀಲಾ, ಕುಡಿ."

ಅವಳು ಗ್ಲಾಸಿನಲ್ಲಿದ್ದುದನ್ನೆಲ್ಲಾ ಒಂದೇ ಏಟಿಗೆ ಗಟಗಟನೆ ಕುಡಿದು ಬಿಟ್ಟಳು.

ಅವನ ಹಿಪ್ನಾಟಿಸಮ್ ಸಕ್‌ಸಸ್ ಆಯಿತು. (ಅವನ ಮೋಡಿ ವಿದ್ಯೆ ಅವಳಮೇಲೆ ಪರಿಣಾಮವನ್ನುಂಟುಮಾಡಿತು.)

"ಹ್ಹ....ಹ್ಹ....ಅಹ್ಹಾ....ಹ್ಹ...." ವಿಕಟಾಟ್ಟಹಾಸ.

ಭಯಂಕರ ನಗು, ಎದೆ ಝಲ್ಲೆನಿಸುವ ರುದ್ರನಗೆ, ಅಶ್ಲೀಲ ನಗೆ ಕೊಠಡಿಯನ್ನೆಲ್ಲಾ ತುಂಬಿತು.

ಅವನು ತನ್ನ ಕಾಮದ ಕಣ್ಣಿಗೆ ಬಿದ್ದ ಅನೇಕ ತರುಣಿಯರನ್ನು ಇದೇ ರೀತಿ ಹಿಪ್ನಾಟಿಸಮ್ ಮಾಡಿ, ಅವರ ಸುಂದರ ದೇಹವನ್ನಾರ್ಪಿಸಿಕೊಂಡಿದ್ದ. ಯಾವ ಸಂಸಾರದ ಬೆಳಕಾಗಿ ಬಾಳಬೇಕಾಗಿತ್ತೋ ಆ ಹೆಣ್ಣುಗಳು ಈ ನೀಚನ ಕೈಗೆ ಸಿಕ್ಕಿ ತಮ್ಮ ಬಾಳಿಗೆ ಬೆಂಕಿಯನ್ನಿಟ್ಟುಕೊಂಡರು. ಕಣ್ಣಿಗೆ ಬಿದ್ದ ಚೆಲುವೆಯರನ್ನನುಭವಿಸದೆ ಬಿಟ್ಟಿರಲಿಲ್ಲ.

"ಮದುವೆ ಹೆಣ್ಣು" ಎಂಬ ಚಲನಚಿತ್ರದಲ್ಲಿ ಆ ಚೋರಚಕ್ರವರ್ತಿ, ಸುಂದರಿ ಲೀಲಾದೇವಿಯನ್ನು ನೋಡಿದ್ದ. ಅವಳ ಸೌಂದರ್ಯಕ್ಕೆ ಮರುಳಾದ. ಆದರೆ ಅದು ಎಟುಕದ ಗಗನಕುಸುಮವೆಂದು ಸುಮ್ಮನಾದ. ಅನಿರೀಕ್ಷಿತವಾಗಿ ಆ ದಿನ ಜನತಾ ಎಕ್ಸ್‌ಪ್ರೆಸ್ಸಿನಲ್ಲಿ ಲೀಲಾದೇವಿಯನ್ನು ಕಂಡು, ತನ್ನ ಮೋಡಿಯ ಪ್ರಭಾವದಿಂದ ವಶಮಾಡಿಕೊಂಡ. ಮತ್ತೆ ಹಕ್ಕಿ ಹಾರಿಹೋಯಿತು. ಹಾರಿ ಹೋದ ಹಕ್ಕಿ ಮತ್ತೆ ಇವನ ಕಾಮಪಂಜರಕ್ಕೆ ಬಂದಿದೆ. ವಶೀಕರಣ ವಿದ್ಯೆಯಿಂದ, ಲೀಲಾದೇವಿಯನ್ನು ಸೂತ್ರದ ಬೊಂಬೆಯಾಗಿ ಮಾಡಿಕೊಂಡಿದ್ದಾನೆ. ಈಗ ಅವಳ ಸುಂದರ ದೇಹವನ್ನನುಭವಿಸಲು ಯಾವ, ಯಾರ ಅಡಚಣೆಯೂ ಇಲ್ಲ.

ಅವನು ನಿಧಾನವಾಗಿ ಲೀಲಾದೇವಿಯ ಬಳಿ ಹೋದ.

"ತಲೆ ಎತ್ತು ಲೀಲಾ?"

ಲೀಲಾದೇವಿ ತಲೆ ಎತ್ತಿದಳು.

ಅವನು ಕ್ಷಣಕಾಲ ಆ ಸುಂದರವದನವನ್ನೀಕ್ಷಿಸಿದ. ಅವನು ಅನೇಕ ರೂಪಸಿಯರನ್ನು ನೋಡಿದ್ದ.

ಆದರೆ ಆ ಲೀಲಾದೇವಿ ಅವರೆಲ್ಲರಿಗಿಂತ ಭಿನ್ನವಾಗಿದ್ದಳು.

ಜಿಂಕೆಯ ಕಣ್ಣಿನಂತೆ ವಿಶಾಲವಾದ ನಯನದ್ವಯ.

ಗಿಣಿಯ ಕೊಕ್ಕಿನ ಕೆಂಪಿನಂತಿದ್ದ ಕೆಂದುಟಿಗಳು.

ಮುಸುಕಿನ ಜೋಳದ ಕಾಳಿನಂತೆ ಜೋಡಿಸಲ್ಪಟ್ಟಿದ್ದ ಶಂಕವರ್ಣದ ದಂತಪಂಕ್ತಿ.

ನಾಗಸಂಪಿಗೆಯಂತಿದ್ದ ನಾಸಿಕ.

ಕಾದ ಕೆನೆಹಾಲಿನ ಮೈ ಬಣ್ಣ.

ಕವಿಗಳು ಹೇಳುವ ಸೌಂದರ್ಯ ಲಕ್ಷಣಗಳು ಅವಳಲ್ಲಿ ಸಂಪೂರ್ಣವಾಗಿದ್ದುವು.

ತನ್ನ ದೃಷ್ಟಿಯನ್ನು ಕೊಂಚ ಕೆಳಗಿಳಿಸಿದಾಗ, ಸೌಂದರ್ಯಕ್ಕೆ ಹೆಚ್ಚಿನ ಮೆರಗನ್ನು ಕೊಟ್ಟಿದ್ದ ಕಮಲದ ಮೊಗ್ಗಿನಂತಿದ್ದ ಕುಚಗಳು ಕಂಡುಬಂದುವು.

ಅವನು ಅವಳನ್ನು ನೋಡುತ್ತಿದ್ದ.

ಮೋಡಿಯಿಂದ ಮಂಕಾಗಿದ್ದ ಲೀಲಾದೇವಿಯ ಮುಖ ಅವನ ಕಡೆಗಿತ್ತು.

ಆ ಸುಂದರ ಕೆಂದುಟಿಗಳನ್ನು ಚುಂಬಿಸಲು ಮುಂದೆ ಹೋದ.

ದೀಪಗಳು ಆರಿದವು.

ಮುಖದ ಮೇಲೊಂದು ಮುಷ್ಟಿ ಹೊಡೆತ ಬಿದ್ದಿತು.

—ಏಟಿನ ನೋವನ್ನು ಲೆಕ್ಕಿಸದೆ, ಅವನು ಕಿಟಕಿಯಿಂದ ಹಾರಿದ.

೧೨

ರಾಮುಚಂದ್‌ನ ಮನೆಯ ಹಾಲಿನಲ್ಲಿ ಶಂಕರ್ ಮತ್ತು ರಾಮ್‌ಚಂದ್ ಮಾತನಾಡುತ್ತಾ ಕುಳಿತಿದ್ದಾರೆ

"ಅವನನ್ನು ಹೇಗಾದರೂ ಹಿಡಿದಿದ್ದರೆ ಚೆನ್ನಾಗಿತ್ತು ಶಂಕರ್."

"ನಾನು ಪ್ರಯತ್ನಪಟ್ಟೆ. ಅದು ವಿಫಲವಾಯಿತು."

ಯಾರೋ ಬಾಗಿಲು ತಟ್ಟಿದ ಶಬ್ದವಾಯಿತು.

ರಾಮುಚಂದ್ ಬಾಗಿಲನ್ನು ತೆಗೆದ.

ತೆರೆದ ಬಾಗಿಲಿನಿಂದ ಆಲಿಯಾಸರು ಮತ್ತು ಜರ್ನಲಿಸ್ಟ್ ಶೇಷಗಿರಿ ಪ್ರವೇಶಿಸಿದರು

"ಬನ್ನಿ."

ಇಬ್ಬರೂ ಒಂದು ಸೋಫದ ಮೇಲೆ ಕುಳಿತುಕೊಂಡರು

"ಏನು ಶೇಷಗಿರಿ ಸಮಾಚಾರ ನಿಮ್ಮ ಗುರು ವಿಲಿಯಂಫಾಸ್ ಎಲ್ಲಯ್ಯ, ಬೊಂಬಾಯಿಗೆ ಬಂದು ಇಷ್ಟು ದಿನವಾಯಿತು. ಅವರ ದರ್ಶನವೇ ಇಲ್ಲ."

"ಹಾಗೇ ವಿಲಿಯಂ, ಬೊಂಬಾಯಿನಲ್ಲೇ ಇದ್ದಿದ್ದರೆ, ಈ ಕೊಲೆ, ಲೂಟಿ ಮುಂತಾದ ಭಯಂಕರ ವ್ಯಾಪಾರಗಳನ್ನು ನೋಡಿಕೊಂಡು ಸುಮ್ಮನೆ ಇರುತ್ತಾನೆಯೇ ಶಂಕರ್. ಅವನು "ಮೃತ್ಯುಪಂಜರ"ದ ರಹಸ್ಯವನ್ನು ಬಿಡಿಸಿದ ಮೇಲೆ, ಅವನ ದೇಹಸ್ಥಿತಿ ಸರಿಯಾಗಿರಲಿಲ್ಲ. ಡಾಕ್ಟರ್ ಮೋಹನ್‌ಸಿಂಗ್ ಸಲಹೆಯಂತೆ ಹವಾ ಬದಲಾವಣೆಗಾಗಿ ಸ್ವಿಡ್ಜರ್ಲೆಂಡ್‌ಗೆ ಹೋಗಿದ್ದಾನೆ."

"ಇನ್ನೇನು ಸಮಾಚಾರ ಶೇಷಗಿರಿ?"

"ನಿನ್ನ ಕ್ಲೈಂಟ್ ಲೀಲಾದೇವಿ ಕೊಲೆಪಾತಕಿ ಅಲ್ಲ ಎಂಬುದನ್ನು

ಸಾಬೀತು ಮಾಡುವಂಥ ಒಂದು ಸಣ್ಣ ಸಾಕ್ಷ್ಯ ನನ್ನ ಬಳಿ ಇದೆ."

"ಏನು ?"

"ಈ ಕರ್ಚಿಫ್."

"ಈ ಕರ್ಚಿಫ್ ನಿನಗೆಲ್ಲಿ ಸಿಕ್ಕಿತು ?"

"ಮೋಹನ್‌ಚಂದ್ ಕೊಲೆಯಾದ ಕ್ಯಾರೇಜನ್ನು ಪೋಲೀಸರು ಪರೀಕ್ಷಿಸಿದಾಗ ಈ ಕರ್ಚಿಫ್ ಕಂಡುಬಂದಿತು. ಪೋಲಿಸರು ಈ ಕರ್ಚೀಫಿಗೆ ಅಷ್ಟು ಪ್ರಾಶಸ್ತ್ಯ ಕೊಡಲಿಲ್ಲ. ನಾನು ಇನ್ಸ್‌ಪೆಕ್ಟರ್ ಅಪ್ಪಣೆ ಪಡೆದು ಈ ಕರ್ಚೀಫನ್ನು ಮನೆಗೆ ತೆಗೆದುಕೊಂಡು ಹೋದೆ."

"ಒಂದು ಮಾತು ಶೇಷಗಿರಿ. ಆ ಕರ್ಚೀಫಿನ ಬಗ್ಗೆ ನಿನಗೇಕೆ ಅಷ್ಟು ಕುತೂಹಲ ಮೂಡಿತು?"

"ಲೀಲಾದೇವಿಯ ವ್ಯಾನಿಟಿ ಬ್ಯಾಗ್ ಹಣದ ಮೇಲೆ ಬಿದ್ದಿತ್ತು. ಆ ಬ್ಯಾಗಿನಲ್ಲಿ ಅವಳ ಕರ್ಚೀಫ್ ಇದ್ದಿತು. ಮೋಹನ್‌ಚಂದ್‌ರವರ ಜೇಬಿನಲ್ಲಿ ಅವರ ಕರ್ಚೀಫ್ ಇದ್ದಿತು. ಕೆಳಗೆ ಬಿದ್ದಿದ್ದ ಕರ್ಚೀಫ್ ಅವರಿಬ್ಬರಿಗೂ ಸಂಬಂಧಪಟ್ಟಿದ್ದಲ್ಲ. ಆ ಕ್ಯಾರೇಜಿನಲ್ಲಿದ್ದ ಮತ್ತೊಬ್ಬ ಪ್ರಯಾಣಿಕನೆಂದರೆ ಒಬ್ಬ ಮುದುಕನಾದ ಗೌಡ. ಅವನ್ಯಾರು? ಎಲ್ಲಿ ಹೋದ? ಎಂಬ ವಿಷಯ ಯಾರಿಗೂ ತಿಳಿಯದು."

"ಅವನು ಮುದುಕನಲ್ಲ. ಮುದುಕ ವೇಷಧಾರಿ ಗುಪ್ತಚಾರ. ಅವನು ಮೋಹನ್‌ಚಂದ್‌ರನ್ನು ಹಿಂಬಾಲಿಸುತ್ತಾ ಅವರ ಪ್ರತಿಯೊಂದು ಚಲನವಲನಗಳನ್ನೂ ಆಗಾಗ್ಗೆ ಈ ಢಕಾಯಿತಿಗಳಿಗೆ ತಿಳಿಸುತ್ತಿದ್ದ."

"ನಿನ್ನ ಕರ್ಚೀಫಿನ ಕತೆ ಹೇಳು ಶೇಷಗಿರಿ."

ರಾಮಚಂದ್ ಅತಿ ಕುತೂಹಲಭರಿತ ಧ್ವನಿಯಲ್ಲಿ ಶೇಷಗಿರಿಯನ್ನು ಪ್ರಶ್ನಿಸಿದ.

"ನಾನು ವಿಲಿಯಂನೊಡನೆ ಅನೇಕ ಮೊಕದ್ದಮೆಗಳಲ್ಲಿ ಕೆಲಸಮಾಡಿದ್ದೇನೆ. ಕೆಲವು ಸಂದರ್ಭದಲ್ಲಿ ಕೊಲೆಯಾದ ಸ್ಥಳದಲ್ಲಿ ಬಿದ್ದಿದ್ದ ಒಂದು ಹುಲ್ಲುಕಡ್ಡಿ, ಮೊಕದ್ದಮೆಯ ಮಾರ್ಗದರ್ಶಕವಾಗಿರುವ ಅನುಭವ ನನಗಿದೆ. ಆದ್ದರಿಂದ ನಾನು ಆ ಕರ್ಚೀಫನ್ನು ಪ್ಟಡಿ ಮಾಡಲು ನನ್ನ ಮನೆಗೆ ಅದನ್ನು ತೆಗೆದುಕೊಂಡು ಹೋದೆ."

"ಮುಂದೆ ?"

ಶೇಷಗಿರಿ ಪ್ಲೆಯರ್ಸ್ ಸಿಗರೇಟು ಹಚ್ಚಿ ಒಂದು ದಂ ಎಳೆದು ವರ್ತುಲಾಕಾರವಾಗಿ ಹೊಗೆಯುಗುಳಿ ಮಾತನ್ನು ಮುಂದುವರಿಸಿದ.

"ಆ ಕರ್ಚೀಫು ಡಿಟರ್‌ಜೆಂಟಿನ ವಾಸನೆಯನ್ನು ಬೀರುತ್ತಿತ್ತು."

"ಅಂದರೆ?"

"ಕಲೆಗಳನ್ನು ತೊಳೆಯಲು ಉಪಯೋಗಿಸುವ ಡಿಟರ್‌ಜೆಂಟಿನಲ್ಲಿ ಆ ಕರ್ಚೀಫ್ ಅದ್ದಲ್ಪಟ್ಟಿತ್ತು."

"ಅದಕ್ಕೂ ಈ ಕೊಲೆಗೂ ಹೇಗೆ ಸಂಬಂಧವನ್ನು ಕಲ್ಪಿಸುತ್ತಿ? ಆ ಡಿಟರ್‌ಜೆಂಟಿನ ಕರ್ಚೀಫು ಲೀಲಾದೇವಿ ಕೊಲೆಪಾತಕಿಯಲ್ಲ ಎಂಬುದಕ್ಕೆ ಹೇಗೆ ಸಾಕ್ಷಿಯಾಗುತ್ತದೆ ?"

ರಾಮಚಂದ್ ಅರ್ಥವಾಗದೆ ಪ್ರಶ್ನಿಸಿದರು. ಶೇಷಗಿರಿಯ ವಾದ ಶಂಕರ್‌ಗೆ ಅರ್ಥವಾಯಿತು.

"ಅವನ ಮಾತು ಸತ್ಯವಾಗಿದೆ."

ಶಂಕರ್ ಹೇಳಿದ.

"ಅದು ಹೇಗೆ ?"

ರಾಮಚಂದ್‌ರವರ ಪ್ರಶ್ನೆ.

"ಡಿಟರ್‌ಜೆಂಟನ್ನು ಕಲೆಗಳನ್ನು ಹೋಗಲಾಡಿಸಲು ಉಪಯೋಗಿಸುತ್ತಾರೆ. ಯಾರೋ ಒಬ್ಬ ವ್ಯಕ್ತಿ ಮೋಹನ್‌ಚಂದ್‌ರವರನ್ನು ಕೊಲೆಮಾಡಿದ. ಆಗ ಅನಿರೀಕ್ಷಿತವಾಗಿ ಅವನ ಬಟ್ಟೆಯ ಮೇಲೆ ರಕ್ತ ಹಾರಿದೆ. ಆಗ ಅವನು ಜನಗಳ ಗುಂಪಿನಲ್ಲಿ ಬೆರೆತು ತಪ್ಪಿಸಿಕೊಳ್ಳಬೇಕಾಗಿತ್ತು. ಯಾರ ಕಣ್ಣಿಗಾದರೂ ರಕ್ತದ ಕಲೆ ಬಿದ್ದು ವಿಷಯ ವಿಪರೀತಕ್ಕೆ ತಿರುಗಬಹುದೆಂಬ ಭಯದಿಂದ ಆ ವ್ಯಕ್ತಿ ಜೇಬಿನಲ್ಲಿದ್ದ ಡಿಟರ್‌ಜೆಂಟ್‌ನ ಬಾಟಲನ್ನು ತೆಗೆದು, ಅದರಲ್ಲಿದ್ದ ಡಿಟರ್‌ಜೆಂಟನ್ನು ಕರ್ಚೀಫಿನ ಮೇಲೆ ಸುರಿದು ಅದರಿಂದ ರಕ್ತದ ಕಲೆಯನ್ನು ಅಳಿಸಿದ್ದಾನೆ.

"ಆದ್ದರಿಂದ ಕೊಲೆಪಾತಕಿ ಲೀಲೆಯಲ್ಲ. ಡಿಟರ್‌ಜೆಂಟ್ ಬಾಟಲು ಅವಳ ಬಳಿಯಲ್ಲಿಲ್ಲ. ಅವಳ ಬಟ್ಟೆಯ ಮೇಲೆ ರಕ್ತವೂ ಹಾರಿಲ್ಲ. ಇದರಿಂದ ಡಿಟರ್‌ಜೆಂಟಿನ ಬಾಟಲನ್ನು ಇಟ್ಟುಕೊಂಡಿದ್ದ ವ್ಯಕ್ತಿ ಆ ಕ್ಯಾರೇಜಿನಲ್ಲಿದ್ದನೆಂಬ

ವಿಷಯದಲ್ಲಿ ಯಾವ ಸಂಶಯವೂ ಇಲ್ಲ.

"ಅದು ಅಲ್ಲದೆ ಆ ವ್ಯಕ್ತಿ ಆತುರದಲ್ಲಿ ಡಿಟರ್‌ಜೆಂಟನ್ನು ಸುರಿಯುವಾಗ ಅದು ಮೋಹನ್‌ಚಂದ್‌ರ ಬಟ್ಟೆಯ ಮೇಲೆ ಬಿದ್ದಿದೆ. ಡಿಟರ್‌ಜೆಂಟ್ ಬಾಟಲಿನ ಕಾರ್ಕ್ ಸಹ ಕ್ಯಾರೇಜಿನಲ್ಲಿ ಬಿದ್ದಿದ್ದಿತು. ಪ್ರಾಯಶಃ ಆ ವ್ಯಕ್ತಿ ಮೊದಲು ಮೋಹನ್‌ಚಂದ್‌ರನ್ನು ಕೊಂದಿದ್ದಾನೆ. ಆಮೇಲೆ ಅವರ ಜೇಬಿಗೆ ಕೈಹಾಕಿ ವಜ್ರವನ್ನು ತೆಗೆದುಕೊಂಡಿದ್ದಾನೆ. ಹಾಗೆ ಕೈಹಾಕುವಾಗ ಅವನ ಬಟ್ಟೆಗೆ ರಕ್ತ ತಗುಲಿದೆ."

"ಬುದ್ಧಿವಂತಿಕೆ ಮತ್ತು ವಿವೇಚನಾಪೂರ್ಣವಾದ ಪರಿಶೋಧನೆ."

—ಅದನ್ನು ಹೇಳಿದವನು ಶಂಕರ್.

"ನನಗರ್ಥವಾಗದೆ ಇದ್ದ ಒಂದು ಪ್ರಶ್ನೆಯಿದೆ ಶಂಕರ್."

"ಏನು?"

"ಜನತಾ ಎಕ್ಸ್‌ಪ್ರೆಸ್ಸಿನಲ್ಲಿ ಮೂವರು ದಗಾಕೋರರಿದ್ದರು, ಅವರು ರಿವಾಲ್ವರ್ ತೋರಿಸಿ, ಮೋಹನ್‌ಚಂದ್‌ನನ್ನು ಹೆದರಿಸಿ, ವಜ್ರವನ್ನು ಅಪಹರಿಸಬಹುದಾಗಿತ್ತು. ಅವರಿಗೆ ಬೇಕಾಗಿದ್ದುದು ವಜ್ರ. ಹೆಚ್ಚು ಗಲಾಟೆಯಿಲ್ಲದೆ ಸುಲಭವಾಗಿ ಅದನ್ನು ಬೆದರಿಸಿ ಕಸಿದುಕೊಳ್ಳದೆ ಕೊಲೆ ಏತಕ್ಕೆ ಮಾಡಿದರು ?"

"ನಿಮ್ಮ ಪ್ರಶ್ನೆ ಸಮಂಜಸವಾದುದೆ-ಅದಕ್ಕೆ ಸರಿಯಾದ ಉತ್ತರವೂ ಇದೆ. ಮೋಹನ್‌ಚಂದ್ ವಜ್ರವನ್ನು ಕೊಂಡುಕೊಂಡಾಗಿನಿಂದಲೂ ಒಬ್ಬ ವ್ಯಕ್ತಿ ಅವರ ಚಲನವಲನಗಳನ್ನು ಗಮನಿಸುತ್ತಿದ್ದ. ಆ ವ್ಯಕ್ತಿಯನ್ನು ಮೋಹನ್ ಚಂದ್ ಅನೇಕ ಭಾರಿ ನೋಡಿದ್ದಾರೆ

"ಶ್ರೀನಗರದಲ್ಲೇ ಅವನ್ನು ದರೋಡೆ ಮಾಡಲು ಪ್ರಯತ್ನಪಟ್ಟಿದ್ದಾನೆ. ಮೋಹನ್‌ಚಂದ್ ವಿಷಯವನ್ನು ಪೋಲಿಸರಿಗೆ ತಿಳಿಸಿದ ಮೇಲೆ, ಆ ವ್ಯಕ್ತಿ ಇವರನ್ನು ಹಿಂಬಾಲಿಸುತ್ತಿದ್ದುದನ್ನು ಬಿಟ್ಟಿದ್ದಾನೆ.

"ಅದೇ ವ್ಯಕ್ತಿ ಬೊಂಬಾಯಿಯಲ್ಲೂ ಮೋಹನ್‌ಸಿಂಗ್‌ರಿಗೆ ಗಂಟುಬಿದ್ದ. ಅವನೇ ಈ ಚೋರಮುಕುಂದ. ಅವನ ಮುಖವನ್ನು ಮೋಹನ್‌ಚಂದ್ ನೋಡಿದ್ದರಿಂದ, ಮುಂದೇನಾದರೂ ಗುರುತಿಸಬಹುದೆಂಬ ಭಯದಿಂದ, ಅವರನ್ನು ಕೊಂದಿದ್ದಾನೆ ಎಂದು ನಾನು ಊಹಿಸಿದ್ದೇನೆ. ಅಥವಾ ಈ ಕೊಲೆ ವಜ್ರಕ್ಕಾಗಿ ಆಗಿದೆ ಎಂಬ ವಿಷಯವನ್ನೇ ಮುಚ್ಚಿಡಲು ಅವರನ್ನು ಕೊಂದಿರ

ಬಹುದು. ಅಂತು ಮೋಹನ್‌ಚಂದ್‌ರನ್ನು ಕೊಂದು ವಜ್ರವನ್ನಪಹರಿಸಿದ. ಅದರ ಮಾರಾಟದ ಸಮಯದಲ್ಲಿ ಮೋಸದ ಬಲೆಯನ್ನು ಬೀಸಲು ಪ್ರಯತ್ನಿಸಿದ ಬೊಂಬಾಯಿವಾಲ ಮತ್ತು ಅವನ ಹಿಂಬಾಲಕನಾದ ಮತ್ತೊಬ್ಬ ಗೂಂಢಾನನ್ನು ಕೊಲೆಮಾಡಿದ."

—ಅಷ್ಟುಹೊತ್ತಿಗೆ ಅರುಗೇಂದ್ರ ಮತ್ತು ಲೀಲಾದೇವಿ ಇಬ್ಬರೂ ಅಲ್ಲಿಗೆ ಬಂದರು.

"ಹಿಪ್ನಾಟಿಸ್ಟ್ ರಾಜಣ್ಣ ಏನು ಹೇಳಿದರು ಅರುಣ?"

"ಮೊದಲು ಅವರು ಕಂಟ್ರೋಲ್ ತೆಗೆಯಲು ಹಿಂತೆಗೆದರು. ವಿಷಯವನ್ನು ವಿವರಿಸಿದ ಮೇಲೆ ಒಪ್ಪಿಕೊಂಡರು."

ಶಂಕರ್ ಮತ್ತು ಅರುಗೇಂದ್ರ ಆಡಿಕ್ಕೊಂಡ ಮಾತು. ಅರುಗೇಂದ್ರ ಹೇಗೆ ಬಂದ. ಅವನೇಕೆ ಹಿಪ್ನಾಟಿಸ್ಟ್ ರಾಜಣ್ಣನ ಬಳಿ ಹೋದ ಮುಂತಾದ ವಿಷಯಗಳು ಅಲ್ಲಿದ್ದವರ್ಯಾರಿಗೂ ಅರ್ಥವಾಗಲಿಲ್ಲ.

"ಅರುಗೇಂದ್ರನ ಬಿಡುಗಡೆಯ ಬಗ್ಗೆ ಏನು ಹೇಳಲೇ ಇಲ್ಲ. ಇಲ್ಲಿಯೇ ಇ|| ಆಲಿ ಇದ್ದಾರೆ, ಅವರ ಎದುರಿನಲ್ಲೇ ಲೀಲಾದೇವಿಯನ್ನು ಕರೆದುಕೊಂಡು ಬರುತ್ತಿದ್ದಾನೆ."

"ಲೀಲಾವತಿ ಕೊಲೆಪಾತಕಿ ಅಲ್ಲ. ಈ ಕೊಲೆ "ಜೈಪ್ರಕಾಶ್" ಎಂಬ ವಜ್ರಕ್ಕೋಸ್ಕರ ಆಗಿದೆ ಎಂಬ ವಿಷಯ ಮೈಸೂರು ಪೋಲೀಸರಿಗೆ ಅರ್ಥವಾಗಿದೆ. ನಾಳೆ ಎಲ್ಲಾ ಪತ್ರಿಕೆಗಳಲ್ಲೂ ಆ ವಿಷಯ ಪ್ರಕಟವಾಗುತ್ತದೆ. ಲೀಲಾದೇವಿ ಇನ್ನೂ ತಲೆಮರೆಸಿಕೊಂಡಿರಬೇಕಾದ ಅವಶ್ಯಕತೆ ಇಲ್ಲ."

"ಅರುಗೇಂದ್ರನ ಬಿಡುಗಡೆ ಹೇಗಾಯಿತು ?"

ಆಲಿಯವರು ಅತ್ಯಂತ ಕುತೂಹಲದಿಂದ ಪ್ರಶ್ನಿಸಿದರು.

"ನಾನು ಲೀಲಾದೇವಿಯನ್ನು ಬೊಂಬಾಯಿ ಹೊಟೇಲಿನಲ್ಲಿ ಇಳಿಸಿದೆ. ಆ ದರೋಡೆಕಾರರು, ನನಗೆ ಅವಳನ್ನು ಗೇಟ್‌ವೇ ಆಫ್ ಇಂಡಿಯಾ ಬಳಿ ಕರೆದುಕೊಂಡು ಬರಬೇಕೆಂದೂ, ಅಲ್ಲಿ ಒಂದು ಕರಿಯ ಕಾರು ಬರುತ್ತದೆ. ಅದರಲ್ಲಿ ಕೂಡಿಸಬೇಕೆಂದೂ ಹೇಳಿದ್ದರು. ನಾನು ಅವರ ಮಾತಿನಂತೆ ನಡೆದುಕೊಳ್ಳಲಿಲ್ಲ

"ನಾನು ನಿತ್ಯವೂ ಅಲ್ಲಿ ವೇಷ ಮರೆಸಿಕೊಂಡು ಸುತ್ತುತ್ತಿದ್ದೆ. ಅದಲ್ಲದೆ

ಅಲ್ಲಿ ಅನೇಕ ಗುಪ್ತಚಾರರನ್ನು ಮಾರುವೇಷದಲ್ಲಿ ಕಾಯುವಂತೆ ಏರ್ಪಾಡು ಮಾಡಿದ್ದೆ. ನನ್ನ ಊಹೆಯಂತೆ ಆ ಚೋರನ ಕಡೆಯವನು ಲೀಲಾದೇವಿಯನ್ನು ಕರೆದುಕೊಂಡು ಹೋದ."

"ಲೀಲಾದೇವಿ ಹೇಗೆ ಅವನ ಜೊತೆಯಲ್ಲಿ ಹೋದಳು?"

"ಹಿಂದಿನ ದಿನ ಆ ಚೋರಪ್ರಮುಖ ಬಂದು ಅವಳನ್ನು ಆ ವಶೀಕರಣದ ಜಾಲದಲ್ಲಿ ಸಿಕ್ಕಿಹಾಕಿಸಿದ್ದ. ಅದರ ಪ್ರಭಾವ ಅವಳ ಮೇಲೆ ಪರಿಣಾಮ ಮಾಡಿತ್ತು. ಆದ್ದರಿಂದ ಅವಳು ಚೋರನ ಕಡೆಯವರು ಬಂದು ಕೂಗಿದ ತಕ್ಷಣ ಹೊರಟಳು. ನಾನು ಅವರನ್ನು ಹಿಂಬಾಲಿಸಿದೆ. ಅವರು ಅವಳನು ಮಾತುಂಗದಲ್ಲಿರುವ ಮನೆಯೊಳಗೆ ಕರೆದುಕೊಂಡು ಹೋದರು.

"ನಾನು ಆ ಮನೆಯ ಸುತ್ತಲೂ ಓಡಾಡುತ್ತಿದ್ದಾಗ ಅಲ್ಲೊಬ್ಬ ವ್ಯಕ್ತಿ ಹೊರಗೆ ಬಂದ. ಅವನ ಮುಖದಮೇಲೆ ಒಂದು ಗುದ್ದಿದೆ ಅವನು ಮೂರ್ಛೆ ಹೋದ. ಅವನ ಜೇಬಿನಲ್ಲಿದ್ದ ಕೆಂಪು ಬಟ್ಟೆಯ ಮುಖವಾಡವನ್ನು ನಾನು ಹಾಕಿಕೊಂಡು ಆ ಭಯಂಕರ ಗೃಹವನ್ನು ಪ್ರವೇಶಿಸಿದೆ. ಕೆಲವು ನಿಮಿಷಗಳಲ್ಲಿ ಅರುಗೇಂದ್ರ ಮತ್ತು ಲೀಲಾದೇವಿಯರನ್ನು ಇಟ್ಟಿದ್ದ ಜಾಗವನ್ನು ತಿಳಿದುಕೊಂಡೆ. ಡಬ್ಬಲ್ ಸ್ವಿಚ್ ಆಫ್ ಮಾಡಿ, ಆ ಕಾರ್ಗತ್ತಲಿನಲ್ಲಿ ಆ ಚೋರ ಮುಖಂಡನ ಮೇಲೆ ಆಕ್ರಮಣ ಮಾಡಿದೆ. ಅವನು ಬಹು ಪ್ರಯಾಸದಿಂದ ತಪ್ಪಿಸಿಕೊಂಡ.

"ಅರುಗೇಂದ್ರ ಮತ್ತು ಲೀಲಾದೇವಿಯವರ ಬಿಡುಗಡೆಯಾಯಿತು."

"ಒಂದು ವಿಷಯ ಶಂಕರ್, ನೀನು ಹೇಳಿದೆ, ಆ ಚೋರಪ್ರಮುಖನೇ ಬಂದು, ಬೊಂಬಾಯಿ ಕೆಫೆಯಲ್ಲಿ ಹಿಪ್ನಾಟಿಸಮ್ ಮಾಡಿದ ಎಂದು ಆಗಲೇ ನೀನು ಅವನನ್ನು ಹಿಡಿಯಬಹುದಾಗಿತ್ತು."

"ಅವನು ನಮ್ಮ ಗುಪ್ತಚಾರರ ಕಣ್ಣು ತಪ್ಪಿಸಿ ಮಾರುವೇಷದಲ್ಲಿ ಬಂದು ಅವಳ ಕೊಠಡಿಯನ್ನು ಪ್ರವೇಶಿಸಿ ಹಿಪ್ನಾಟಿಸಮ್ ಮಾಡಿದ್ದಾನೆ. ನಾನು ಅವನನ್ನು ಕಣ್ಣಿನಿಂದ ನೋಡಿದರೆ, ಅವನನ್ನು ಹಿಡಿಯದೇ ಬಿಡುತ್ತೇನೆಯೇ? ಇದು ನನ್ನ ಕಲ್ಪನೆ—ಈ ಭಯಂಕರ ವ್ಯವಹಾರಗಳ ಹಿಂದಿರುವ ವ್ಯಕ್ತಿಯ ಬಗ್ಗೆ ಆಲೋಚಿಸುತ್ತಿದ್ದೇನೆ. ಇನ್ನೂ ಕೆಲವು ಸಾಕ್ಷ್ಯಗಳು ಸರಿಯಾಗಿ ದೊರೆ

ತಲ್ಲಿ ಅವನನ್ನು ಅರೆಸ್ಟ್ ಮಾಡಬಹುದು."

"ಆದರೆ ಅವನಿರುವ ಸ್ಥಳ?"

"ಅವನು ಯಾವ ಬೆಟ್ಟದ ಬುಡದ ಗುಹೆಯಲ್ಲೂ ವಾಸಿಸುತ್ತಿಲ್ಲ. ನಾವು ವಾಸಮಾಡುತ್ತಿರುವ ಸಮಾಜದಲ್ಲೇ ಒಬ್ಬ ಗಣ್ಯವ್ಯಕ್ತಿಯ ಮುಸುಕನ್ನು ಹಾಕಿಕೊಂಡು ಜೀವಿಸುತ್ತಿದ್ದಾನೆ."

"ಕೆಲವು ವಿಷಯಗಳನ್ನು ನಾನು ಪತ್ರಿಕೆಯಲ್ಲಿ ಪ್ರಕಟಿಸುವುದರಿಂದ ತಮ್ಮ ಇನ್‌ವೆಸ್ಟಿಗೇಷನ್‌ಗೆ ತೊಂದರೆಯಾಗುವುದಿಲ್ಲತಾನೇ ಶಂಕರ್?"

"ಈಗ ನಾನು ಹೇಳಿದ ಒಂದು ವಿಷಯವನ್ನು ಬಿಟ್ಟು ಮಿಕ್ಕ ಎಲ್ಲ ವಿಷಯವನ್ನು ಪ್ರಕಟಿಸಬಹುದು ಶೇಷಗಿರಿ."

"ನಾನು ಹೋಗುತ್ತೇನೆ ಶಂಕರ್."

ಆಲಿಯುವರು ಹೊರಟುಹೋದರು.

೧೩

"ಟಕ್ ಟಕ್."

"ಯಾರು ?"

"ನಾನು."

"ಬನ್ನಿ ಚಂದ್ರಕುಮಾರ್, ಏನು ವಿಷಯ ? ನಿಮ್ಮ ಮುಖವೇ ಬದಲಾಯಿಸಿ ಹೋಗಿದೆ ?"

"ಶಂಕರ್ ಇದ್ದಾರೆಯೋ ರಾಮಚಂದ್ ?"

"ಏನು ವಿಷಯ "?

"ಬಹಳ ಜರೂರಾಗಿ ಅವರನ್ನು ಕಾಣಬೇಕಿತ್ತು."

"ಏನು ವಿಷಯ ?"

ಚಂದ್ರಕುಮಾರ್ ಅಲ್ಲಿದ್ದ ಸೋಫದ ಮೇಲೆ ಕುಳಿತುಕೊಂಡ. ಅವನ ಮುಖದಲ್ಲಿ ಭಯದ ಗೆರೆಗಳಿದ್ದುವು. ಅವನು ದೀರ್ಘವಾದ ನಿಟ್ಟುಸಿರನ್ನು ಬಿಡುತ್ತಿದ್ದ.

"ನನಗೆ ಲಕ್ಷಾಂತರ ರೂಪಾಯಿ ನಷ್ಟವಾಗಿದೆ."

"ವಿಷಯುವನ್ನು ವಿವರವಾಗಿ ಹೇಳು ಚಂದ್ರಕುಮಾರ್ :"

ಸಮಯಕ್ಕೆ ಸರಿಯಾಗಿ ಶಂಕರ್ ಬಂದ.

"ಏನು ರಾಮಚಂದ್ ?"

"ಚಂದ್ರಕುಮಾರ್‌ಗೆ ಯಾವುದೋ ತೊಂದರೆಯಾಗಿದೆಯಂತೆ. ಅವರು ನಿನ್ನನ್ನು ಕಾಣಲು ಬಂದಿದ್ದಾರೆ."

"ಆ ಚಂಡಾಳನಿಂದ ನನಗೆ ಲಕ್ಷಾಂತರ ರೂಪಾಯಿ ನಷ್ಟವಾಯಿತು. ಹೊಸಹೊಸದು ಸಾರ್. ಇನ್ನೂ ಆರು ತಿಂಗಳು ಕೂಡ ಆಗಿಲ್ಲ."

"ನಿಮ್ಮ ಮಾತೇ ನನಗೆ ಅರ್ಥವಾಗುತ್ತಿಲ್ಲ ಚಂದ್ರಕುಮಾರ್."

"ನನ್ನ ಬಂಗಲೆಯನ್ನು ಬಾಡಿಗೆದಾರ ಬೆಂಕಿ ಇಟ್ಟು ಸುಟ್ಟುಬಿಟ್ಟಿದ್ದಾನೆ. ನೆನ್ನೆ ರಾತ್ರೆ ಫರ್ನಿಚರುಗಳು, ಬಂಗಲೆ ಎಲ್ಲ ಸುಟ್ಟುಹೋಯಿತು. ಕಟ್ಟಿಸಿ ಆರು ತಿಂಗಳು ಸಹ ಆಗಿಲ್ಲ ಸಾರ್. ಒಂದು ಲಕ್ಷ ರೂಪಾಯಿ ಖರ್ಚುಮಾಡಿ ಕಟ್ಟಿಸಿದ್ದೆ. ಅದರ ಬಾಡಿಗೆಯಿಂದಲೇ ಜೀವನ ನಡೆಸುತ್ತಿದ್ದೆ. ನೆನ್ನೆ ರಾತ್ರೆ ಮನೆಗೆ ಬೆಂಕಿ ಇಟ್ಟುಬಿಟ್ಟಿದ್ದಾರೆ. ಅದರಲ್ಲಿದ್ದ ಫರ್ನಿಚರ್ ಸಹ ನನ್ನದೇ ಸಾರ್. ಹತ್ತುಸಾವಿರ ರೂಪಾಯಿ ಫರ್ನಿಚರ್, ಸರ್ವನಾಶವಾಯಿತು. ಫೈರ್ ಬ್ರಿಗೇಡ್ ವ್ಯಾನು ಬರುವ ಹೊತ್ತಿಗೆ ಸಕಲವೂ ಬೂದಿಯಾಗಿತ್ತು."

ಚಂದ್ರಕುಮಾರ್ ನಿಟ್ಟುಸಿರು ಬಿಡುತ್ತಾ ಒಂದೇ ಏಟಿಗೆ ಬಡಬಡನೆ ಮಾತನಾಡಿದ.

ಶಂಕರ್ ಅವನ ಮಾತುಗಳನ್ನು ಸಂಪೂರ್ಣವಾಗಿ ಕೇಳಿದ.

"ಬೆಂಕಿ ಹತ್ತಿದ್ದು ಆಕಸ್ಮಿಕವೋ ಅಥವಾ ಯಾರಾದರೂ ನಿಮ್ಮ ಶತ್ರುಗಳು ಹೊಟ್ಟೆಕಿಚ್ಚಿನಿಂದ ಹಚ್ಚಿದರೋ ?"

"ಏನಾದರೇನು ಸಾರ್, ಅಂತು ನನ್ನ ಬಂಗಲೆ ಉರಿದು ಬೂದಿಯಾಯಿತು."

"ನಾನೇನು ಮಾಡಲು ಸಾಧ್ಯ ಚಂದ್ರಕುಮಾರ್."

"ಯಾರಾದರೂ ಹೊಟ್ಟೆಕಿಚ್ಚಿನಿಂದ ಈ ಕಾರ್ಯ ಮಾಡಿದ್ದರೆ, ಅವರನ್ನು ಹಿಡಿದು, ಅವರಿಂದ ಹಣವನ್ನು ವಸೂಲು ಮಾಡಿಕೊಡುವುದಕ್ಕಾಗುವುದಿಲ್ಲವೇ ?"

ಇದೊಂದು ವಿಚಿತ್ರ ಮೊಕದ್ದಮೆ. ಅವನ ಪತ್ತೇದಾರಿ ಇತಿಹಾಸದಲ್ಲಿ ಇಂತಹ ಮೊಕದ್ದಮೆ ಶಂಕರ್‌ಗೆ ಮೊದಲಬಾರಿ ಗಂಟುಬಿತ್ತು.

ಶಂಕರ್ ಏನನ್ನೋ ಆಲೋಚಿಸುತ್ತಿದ್ದ.

"ನಿಮ್ಮ ಮನೆ ಎಲ್ಲಿರುವುದು ಮಿ|| ಚಂದ್ರಕುಮಾರ್ ?"

"ಮಾತುಂಗಾದಲ್ಲಿ."

"ಹೋಟೆಲ್ ಲೂಧಿಯಾನದ ಪಕ್ಕದ ಬಂಗಲೆತಾನೇ ?"

"ಹೌದು."

"ಆ ಮನೆಯ ವಿಚಾರ ನಿಮಗೆ ತಿಳಿದಿದೆಯೋ ಚಂದ್ರಕುಮಾರ್ ?"

"ಮುಂಚೆ ತಿಳಿದಿರಲಿಲ್ಲ ಸಾರ್, ಈ ದಿನ ಪೋಲೀಸಿನವರಿಂದ ತಿಳಿಯ ಲಾಯಿತು."

"ಇನ್ಸ್ಪೆಕ್ಟರ್ ಏನು ಹೇಳಿದರು?"

"ಆ ಮನೆಯಲ್ಲಿ ಒಂದು ಢಕಾಯಿತರ ಗುಂಪೇ ಇದ್ದಿತೆಂದೂ, ಅಲ್ಲಿ ಅರುಗೇಂದ್ರನನ್ನು ಬಂಧಿಸಿಟ್ಟದ್ದರೆಂದು ತಿಳಿಸಿದರು. ಪೋಲಿಸರು ಆ ಮನೆ ಯನ್ನು ಮುತ್ತಿಗೆ ಹಾಕುವುದರಲ್ಲಿ ಅದು ಅಗ್ನಿಗೆ ಆಹುತಿಯಾಗುತ್ತಿತ್ತೆಂದ ತಿಳಿದುಬಂದಿತು."

"ನೀವು ಆ ಮನೆಯನ್ನು ಯಾರಿಗೆ ಬಾಡಿಗೆಗೆ ಕೊಟ್ಟದ್ದಿರಿ?"

"ಇಸ್ಮಾಯಿಲ್ ಖಾನ್‌ಗೆ."

"ಅವನು ನೋಡಲು ಹೇಗಿದ್ದಾನೆ?"

"ಉದ್ದಮುಖದ ಕರಿಯ ಬಣ್ಣದ ಕುಳ್ಳ ವ್ಯಕ್ತಿ."

"ಬಾಡಿಗೆ ವಸೂಲು ಮಾಡಲು ನೀವು ಹೋಗುತ್ತಿದ್ದಿರೋ ಅಥವಾ ಬೇರೆ ಯಾರನ್ನಾದರೂ ಕಳುಹಿಸುತ್ತಿದ್ದಿರೋ?"

"ಎರಡೂ ಇಲ್ಲ."

"ಅಂದರೆ?"

"ಅವನೇ ಹಣವನ್ನು ಮನಿಯಾರ್ಡರ್ ಮಾಡುತ್ತಿದ್ದ."

"ಇಸ್ಮಾಯಿಲ್ ಖಾನ್ ಎಲ್ಲಿ ಕೆಲಸ ಮಾಡುತ್ತಿದ್ದ? ಅವನು ಎಲ್ಲಿಂದ ಬಂದ? ಎಂಬ ವಿಷಯಗಳೇನಾದರೂ ತಮಗೆ ತಿಳಿದಿದೆಯೇ ಮಿಸ್ಟರ್ ಚಂದ ಕುಮಾರ್?"

"ಇಲ್ಲ."

"ನೀವು ಬಾಡಿಗೆಗೆ ಕೊಟ್ಟದ್ದ ಬಂಗಲೆ, ದರೋಡೆಗಾರರ ಕಾರಸ್ಥಾನವಾ ಗಿತ್ತು. ಮೂರು ಕೊಲೆಗಳನ್ನು ಮಾಡಿ "ಜೈಪ್ರಕಾಶ್" ಎಂಬ ವಜ್ರವನ್ನು ಅಪಹರಿಸಿರುವ ಬೊಂಬಾಯಿನ ದಗಾಕೋರ, ಆ ಬಂಗಲೆಯಲ್ಲಿ ವಾಸಿಸುತ್ತಿದ್ದ. ಅಲ್ಲಿ ಅರುಗೇಂದ್ರನನ್ನು ಬಂಧಿಸಿದ್ದರು. ಲೀಲಾದೇವಿಯನ್ನು ಬಂಧಿಸಿ ಅಲ್ಲಿಗೆ ಕರೆದುಕೊಂಡು ಹೋಗಿದ್ದರು. ನೆನ್ನೆ ರಾತ್ರೆ ನಾನು ಆ ಬಂಗಲೆಯನ್ನು ಭೇದಿಸಿ, ಅಲ್ಲಿದ್ದ ಅರುಗೇಂದ್ರ ಮತ್ತು ಲೀಲಾದೇವಿಯನ್ನು ಬಿಡಿಸಿಕೊಂಡು ಬಂದೆ. ಅಲ್ಲಿ ಅನೇಕ ಗುಪ್ತದ್ವಾರಗಳಿದ್ದವು. ಪೋಲೀಸರು ಆ ಮನೆಯನ್ನು ಮುತ್ತಿಗೆ

ಹಾಕುತ್ತಾರೆ ಎಂಬ ಭಯದಿಂದ ಆ ದಗಾಕೋರ ಓಡಿಹೋದ. ಓಡಿಹೋಗುವಾಗ ಆ ಮನೆಗೆ ಬೆಂಕಿ ಹಚ್ಚಿ ಹೋದ. ಸುಟ್ಟುಹೋದ ನಿಮ್ಮ ಬಂಗಲೆಯ ಬಗ್ಗೆ ನನಗೆ ಸಹಾನುಭೂತಿ ಇದೆ. ನಾನು ತಮಗೆ ಮತ್ತೇನು ಸಹಾಯ ಮಾಡಲು ಸಾಧ್ಯವಿಲ್ಲ ಎಂಬುದನ್ನು ತಿಳಿಸಲು ವಿಷಾದಪಡುತ್ತೇನೆ."

ಶಂಕರ್ ಜೇಬಿನಿಂದ ಮೈಕ್ರೋಪೋಲೋ ಸಿಗರೇಟು ತೆಗೆದು ತುಟಿಯಂಚಿನಲ್ಲಿ ಸಿಕ್ಕಿಸಿ ಲೈಟರ್‌ನಿಂದ ಅಗ್ನಿಸಂಸ್ಕಾರ ಮಾಡಿದ. ನಿಧಾನವಾಗಿ ಒಂದು ದಂ ಎಳೆದು ಹೊಗೆಯುಗುಳಿದ.

"ನಾನು ಬರುತ್ತೇನೆ ಶಂಕರ್ ?"

"ಬರಬಹುದು."

—ಚಂದ್ರಕುಮಾರ್ ಅಲ್ಲಿಂದ ನಿಧಾನವಾಗಿ ಹೊರಗೆ ಹೋದ. ರಾಮಚಂದ್ ಚಂದ್ರಕುಮಾರ್ ಹೋಗುವುದನ್ನೇ ನೋಡುತ್ತಿದ್ದ. ಶಂಕರ್ ಏನನ್ನೋ ಆಲೋಚಿಸುತ್ತಿದ್ದ.

"ಚಂದ್ರಕುಮಾರನಿಗೆ ತುಂಬಾ ಅನ್ಯಾಯವಾಗಿದೆ ಶಂಕರ್. ಅವನಿಗೆ ಲಕ್ಷಾಂತರ ರೂಪಾಯಿ ನಷ್ಟವಾಗಿದೆ."

"ಮನೆಯನ್ನು ಬಾಡಿಗೆಗೆ ಕೊಟ್ಟ ಚಂದ್ರಕುಮಾರ್, ತನ್ನ ಮನೆಯಲ್ಲಿ ವಾಸಮಾಡುವಂಥ ವ್ಯಕ್ತಿಯ ಬಗ್ಗೆ ಏನು ತಿಳಿದುಕೊಳ್ಳದೆ ಇರುವುದು ಬಹಳ ತಪ್ಪು."

"ನಿನ್ನ ವಾದ ಖಂಡಿತ ವಿಚಿತ್ರವಾಗಿದೆ ಸಾರ್, ಇಸ್ಮಾಯಿಲ್‌ಖಾನ್ ಎಂಬ ಶ್ರೀಮಂತ ವ್ಯಕ್ತಿಯೊಬ್ಬ ಬಹಳ ಹಿಂದೆ ಆ ಬಂಗಲೆಗೆ ಬಂದ. ಸರಿಯಾದ ತಾರೀಕಿಗೆ ಬಾಡಿಗೆಕೊಡುತ್ತಿದ್ದ. ಅವನ ಬಗ್ಗೆ ತಿಳಿಯಬೇಕಾದ ವಿಷಯವೇನು ?"

"ನಿನ್ನ ಮಾತು ಒಂದು ರೀತಿಯಲ್ಲಿ ಸರಿಯಾಗಿದೆ ಅನ್ನು."

"ಈ ಕೇಸು ಮುಗಿಯಲು ಇನ್ನು ಎಷ್ಟು ದಿನ ಬೇಕಾಗುತ್ತದೆ ಮಿಸ್ಟರ್ ಶಂಕರ್ ?"

"ಒಂದು ರೀತಿಯಲ್ಲಿ ಮುಗಿದಂತೆಯೇ ಅನ್ನು."

"ಅದು ಹೇಗೆ ?"

"ಲೀಲಾವತಿ ಬಂದು ನನ್ನ ಬಳಿ "ಕೊಲೆಪಾತಕಿ ನಾನಲ್ಲ" ಎಂದ್ ಹೇಳಿದಳು. ನನ್ನ ಮನಸ್ಸಿಗೆ ಅವಳು ನಿರಪರಾಧಿ ಎಂಬ ಭಾವ ಬಂದಿತು. ನಾನು ಅದಕ್ಕೆ ತಕ್ಕ ನಷ್ಟಗಳನ್ನು ಹುಡುಕಲು ಈ ಮೊಕದ್ದಮೆಯನ್ನು ಪ್ರವೇಶಿಸಿದೆನು.

"ಜರ್ನಲಿಸ್ಟ್ ಶೇಷಗಿರಿ ಹೇಳಿದ ಡೆಟರ್‌ಜೆಂಟ್‌ನಲ್ಲಿ ಅದ್ದಲ್ಪಟ್ಟ ಕರ್ಚಿಫ ಮತ್ತು ಡೆಟರ್‌ಜೆಂಟಿನ ಬಾಟಲಿನ ಕಾರ್ಕ್ ಮುಂತಾದುವುಗಳ ಸಹಾಯದಿಂದು ಕೊಲೆಪಾತಕಿ ಅವಳಲ್ಲ. ಯಾರೋ ಕೊಲೆಮಾಡಿ ಹಿಪ್ನಾಟಿಸಮ್ಮಿನ ಅಸ್ತ್ರದಿಂದ ಅವಳನ್ನು ಕ್ಯಾರೇಜು ಇಳಿಸಿ ಓಡಿಹೋಗುವಂತೆ ಮಾಡಿ, ಅವಳಮೇಲೆ ಸಲ್ಲದ ಅಪಾದನೆಯನ್ನು ಹೊರೆಸಿದ್ದರು ಎಂಬುದನ್ನು ಆದಷ್ಟು ನಾನು ಸಾಬೀತು ಮಾಡಿದ್ದೇನೆ.

"ಅಲ್ಲಿಗೆ ಅಪರಾಧಿನಿ ಲೀಲಾದೇವಿಯಲ್ಲ ಎಂಬುದು ಸಾಕ್ಷ್ಯಗಳಿಂದ ನಿರ್ಧರವಾಯಿತು. ಅಲ್ಲಿಗೆ ಮೊಕದ್ದಮೆಯು ಮುಕ್ಕಾಲು ಭಾಗ ಸಮರ್ಪಕವಾಗಿ ಮುಗಿದಂತಾಯಿತು. ಕೊಲೆಪಾತಕಿ ಅವಳಲ್ಲ! ಹಾಗಾದರೆ ಕೊಲೆಪಾತಕಿ ಯಾರು? ಅದನ್ನು ಅತಿ ಶೀಘ್ರವಾಗಿ ಕಂಡು ಹಿಡಿಯುತ್ತೇನೆ. ನಾನೊಂದು ಬಗೆಯಾಗಿ ಲೆಕ್ಕಚಾರ ಹಾಕುತ್ತಿದ್ದೇನೆ. ಹೆಚ್ಚುಕಡಿಮೆ ನನ್ನ ಲೆಕ್ಕಾಚಾರಗಳು ತಪ್ಪಾಗುವುದಿಲ್ಲ ಮತ್ತು ಸತ್ಯಕ್ಕೆ ನಿಜಕ್ಕೆ ಬಹಳ ಸಮೀಪವಾಗಿರುತ್ತದೆ.

"ಈ ಮೊಕದ್ದಮೆಯಲ್ಲಿ ನನ್ನ [ಚೈನ್ ಆಫ್ ಲಾಜಿಕ್]ಗೆ ಜಯವಾದಲ್ಲಿ ಬಹಳ ಬೇಗ ಬೊಂಬಾಯಿನ ದಗಾಕೋರನಿಗೆ ಬೇಡಿ ತೊಡಿಸುತ್ತೇನೆ."

"ಕೊಲೆಪಾತಕಿ ಲೀಲಾವತಿಯಲ್ಲ. ಈ ಅಲ್ಲೋಲ ಕಲ್ಲೋಲಗಳ ಮಧ್ಯದಲ್ಲಿ ಅನಿರೀಕ್ಷಿತವಾಗಿ ಆ ಮುಗ್ಧೆ ಸಿಕ್ಕಿಹಾಕಿಕೊಂಡು ಇಲ್ಲದ ತೊಂದರೆಗಳಿಗೆ ಒಳಗಾದಳು. ನೀನು ಆ ದಿನ ಸಮಯಕ್ಕೆ ಸರಿಯಾಗಿ ಹೋಗದೆ ಇದಿದ್ದರೆ ಅವಳಿಗೆ ಮಾನಹಾನಿಯಾಗುತ್ತಿತ್ತು."

"ನೀನು ಹೇಳುವುದು ಚೆನ್ನಾಗಿದೆ ರಾಮಚಂದ್. ನಾನು ಅವಳನ್ನು ಬೊಂಬಾಯಿಗೆ ಕರೆದುಕೊಂಡು ಬಂದು ಶತ್ರುಗಳ ಕೈಗೆ ಸಿಲುಕಿಸುತ್ತೇನೆಯೇ? ನಾನು ಅವಳು ನನ್ನ ಬಳಿಗೆ ಬಂದಾಗ ಅಭಯವನ್ನು ಕೊಟ್ಟೆ. ನನ್ನ ಪ್ರಾಣವನ್ನಾದರೂ ಕೊಟ್ಟು ಅವಳ ಪ್ರಾಣವನ್ನುಳಿಸುತ್ತೇನೆ."

ಶಂಕರ್ ಅಷ್ಟು ಮಾತನ್ನಾಡಿ ಏನೋ ಆಲೋಚಿಸತೊಡಗಿದ. ಅವನ ಬಾಯಿನಿಂದ ಸಿಗರೇಟಿನ ಹೊಗೆ ಅಲೆಅಲೆಯಾಗಿ ಬರತೊಡಗಿತು.

ರಾಮಚಂದ್ ಶಂಕರ್‌ನನ್ನೇ ನೋಡುತ್ತಿದ್ದ. ಅವನ ಬುದ್ಧಿಶಕ್ತಿ ವಿವೇಚನಾಶಕ್ತಿ ಧೈರ್ಯಗಳ ಬಗ್ಗೆ ರಾಮಚಂದ್‌ಗೆ ಬಹಳ ಗೌರವವಿತ್ತು.

"ಏನು ಬಹಳ ಗಾಢವಾಗಿ ಆಲೋಚಿಸುತ್ತಿದ್ದೀಯಾ ಶಂಕರ್ ?"

"ಜರ್ನಲಿಸ್ಟ್ ಶೇಷಗಿರಿಯ ವಿಷಯ ಆಲೋಚಿಸುತ್ತಿದ್ದೆ."

"ಏನು ವಿಷಯ ?"

"ಶೇಷಗಿರಿ, ವಿಲಿಯಂ ಫಾಸ್ಟ್‌ನ ಜೊತೆಯಲ್ಲಿ ಸೇರಿದ ಮೇಲೆ ಲಾಜಿಕ್ಕನ್ನು ಚೆನ್ನಾಗಿ ಮನನ ಮಾಡಿಕೊಂಡ."

"ಆ ಯೋಚನೆ ಏಕೆ ಬಂದಿತು ?"

"ಶೇಷಗಿರಿ ಡಿಟೆಕ್ಟಿವ್‌ರ್ ಜೆಂಟನ ವಿಷಯವನ್ನು ಹೇಳಿದ್ದು ನನ್ನ ಪತ್ತೇದಾರಿಕೆಗೆ ತುಂಬಾ ಸಹಾಯಮಾಡಿತು. ಅವನು ಹೇಳಿದ ವಿಷಯ ತುಂಬಾ ಸಾಮಾನ್ಯವಾಗಿ ಕಾಣಬಹುದು. ನಿಜವಾದ ಕೊಲೆಪಾತಕನನ್ನು ಕಂಡುಹಿಡಿಯಲು, ಮತ್ತು ಲೀಲಾದೇವಿ ಕೊಲೆಪಾತಕಿಯಲ್ಲ ಎಂಬುದನ್ನು ಸ್ಥಿರಪಡಿಸಲಿಕ್ಕೂ ಆ ವಿಷಯ ಬಹಳ ಮುಖ್ಯವಾದುದು."

" —"ಜೈಪ್ರಕಾಶ್" ಈಗ ಎಲ್ಲಿಗೆ ಹೋಗಿರಬಹುದು."

"ಸಧ್ಯದ ಪರಿಸ್ಥಿತಿಯಲ್ಲಿ ಅದನ್ನು ಹೊರತೆಗೆಯುವುದು ಅಪಾಯ ಎಂಬ ಭಾವನೆ ಆ ಚೋರರಿಗೆ ಬಂದಿದೆ. ನಾನು ಅವರ ರಹಸ್ಯಸ್ಥಾನವನ್ನು ಭೇದಿಸಿ, ಅರುಗೇಂದ್ರ ಮತ್ತು ಲೀಲಾದೇವಿಯನ್ನು ಬಿಡಿಸಿದ ಮೇಲೆ, ಅವರ ಹೃದಯದಲ್ಲಿ ಕೊಂಚ ಭೀತಿ ಮೂಡಿದೆ."

"ಶಂಕರ್ ಇದ್ದಾರೆಯೋ ?"

ಯಾರೋ ಬಾಗಿಲಿನ ಬಳಿ ಬಂದು ಕೂಗಿದರು.

"ಯಾರು ?"

ಎಂದು ಹೇಳುತ್ತಾ ರಾಮಚಂದ್ ಬಂದಿದ್ದ ವ್ಯಕ್ತಿಯನ್ನು ನೋಡಲು ಬಾಗಿಲ ಬಳಿ ಬಂದ. ಕಾಕಿ ಉಡುಪಿನ ಪೋಲಿಸ್ ಅಧಿಕಾರಿಯೊಬ್ಬ ಬಾಗಿಲಲ್ಲಿ ನಿಂತಿದ್ದ. ಅವನ ಕಣ್ಣುಗಳು ಕುಡುಕರ ಕಣ್ಣಿನಂತೆ ಕೆಂಪಾಗಿದ್ದವು. ಅವನ ಮುಖದ ಮೇಲೆ ಕೋಪದ ಗೆರೆಗಳು ಮೂಡಿದ್ದುವು. ಅವನು ಶೀಘ್ರ

ಕೋಪಿ ಎಂಬ ವಿಷಯ ಸಾಮಾನ್ಯ ಸೈಕಾಲಜಿಯನ್ನು ಬಲ್ಲ ಯಾರು ಬೇಕಾದರೂ ಒಮ್ಮೆ ಅವನ ಮುಖ ನೋಡಿದೊಡನೆ ಹೇಳಬಹುದಾಗಿತ್ತು."

"ತಾವು ಯಾರು ?"

ರಾಮಚಂದ್ ತನ್ನ ಸ್ವಾಭಾವಿಕ ವಿನಯಪೂರಿತ ಧ್ವನಿಯಲ್ಲಿ ಪ್ರಶ್ನಿಸಿದ.

"ನಾನು ಶಂಕರ್‌ರವರನ್ನು ನೋಡಬೇಕಾಗಿತ್ತು. ಆತ ಇಲ್ಲಿದ್ದಾನೆ. ಎಂದು ತಿಳಿದುಬಂದಿದೆ. ಅವರಿದ್ದರೆ ಬಾಲನ್ ಬಂದಿದ್ದಾರೆ ಎಂದು ತಿಳಿಸಿ."

"ಓಹೋ ಇ|| ಬಾಲನ್‌ರವರೇ ಬನ್ನಿ, ಶಂಕರ್ ಇದ್ದಾರೆ."

ಬಾಲನ್ ಒಳಗೆ ಹೋದ. ಶಂಕರ್ ಅಲ್ಲಿಯೇ ಕುಳಿತುಕೊಂಡು ತನ್ನ ಮೆಚ್ಚಿನ ಮಾಕ್ರೋಪೋಲೋ ಸಿಗರೇಟನ್ನು ಸೇದುತ್ತಿದ್ದ.

"ಬನ್ನಿ ಬಾಲನ್, ಏನು ಸಮಾಚಾರ ?"

"ಶಂಕರ್, ನೀವು ಅಪರಾಧಿನಿಯನ್ನು ನಿರಪರಾಧಿ ಎಂದು ಹೇಳಿದ್ದಲ್ಲದೆ, ಈ ಕೊಲೆಗಳಿಗೂ "ಜೈಪ್ರಕಾಶ್" ವಜ್ರಕ್ಕೂ ಇಲ್ಲದ ಸಂಬಂಧ ಕಲ್ಪಿಸುತ್ತಿದ್ದೀರಿ."

ಶಂಕರ್, ಬಾಲನ್ ಮಾತನ್ನು ಕೇಳಿ ನಕ್ಕುಬಿಟ್ಟ

ಬಾಲನ್‌ಗೆ ಶಂಕರ್‌ನ ಈ ಬಗೆಯ ವರ್ತನೆಯಿಂದ ವಿಪರೀತ ಕೋಪ ಬಂದಿತು.

"ಲೀಲಾದೇವಿಗೂ ಮೋಹನ್‌ಚಂದ್‌ಗೂ ಯಾವುದೋ ಕಲುಷಿತ ಸಂಬಂಧವಿತ್ತು. ಅವರಿಬ್ಬರಲ್ಲಿ ಯಾವುದೋ ಕಾರಣದಿಂದ ದ್ವೇಷ ಬೆಳೆದು ಬಂದಿತು. ಅವಳು ಮೋಹನ್‌ಚಂದ್‌ನನ್ನು ಕೊಲೆಮಾಡಿದಳು. ಈ ಕೊಲೆಗೂ "ಜೈಪ್ರಕಾಶ್" ವಜ್ರಕ್ಕೂ ಯಾವ ಸಂಬಂಧವೂ ಇಲ್ಲ. ನನ್ನ ದೃಷ್ಟಿಯಲ್ಲಿ ಮೋಹನ್‌ಚಂದ್ ಶ್ರೀನಗರದಿಂದ "ಜೈಪ್ರಕಾಶ್" ವಜ್ರವನ್ನು ಬೊಂಬಾಯಿಗೆ ತರಲೇ ಇಲ್ಲ."

"ಈ ವಿಷಯ ವಿವರಣೆಯ ಬಗ್ಗೆ ಸರಿಯಾದ ಸಾಕ್ಷ್ಯವಿದೆಯೇ ಬಾಲನ್ ?"

"ಅದರ ಯೋಚನೆ ನನಗಿಲ್ಲ. ಲೀಲಾದೇವಿ ಕೊಲೆಪಾತಕಿ ಎಂಬುದಕ್ಕೆ ನಂಬಲರ್ಹವಾದ ಸಾಕ್ಷ್ಯಗಳಿವೆ. ಕೊಲೆಯಾದ ಒಡನೆ ಅವಳು ಸರಪಳಿ ಎಳೆದು ರೈಲು ನಿಲ್ಲಿಸಿದಳು. ಕ್ಯಾರೇಜಿನಿಂದ ಓಡಿಹೋಗಿ ಕಾರಿನಲ್ಲಿ ಕುಳಿತು

ಕೊಂಡು ಹೋಗಿದ್ದನ್ನು ಅನೇಕರು ಕಂಡಿದ್ದಾರೆ."

"ಕೊಲೆಯಾದ ಒಡನೆಯೇ ಲೀಲಾದೇವಿ ಸರಪಳಿ ಎಳೆದು ರೈಲು ನಿಲ್ಲಿಸಿದಳು ಅಲ್ಲವೇ ಬಾಲನ್ ?"

"ಹೌದು, ಅದರಲ್ಲಿ ಯಾವ ಅನುಮಾನವೂ ಇಲ್ಲ."

"ಆದರೆ, ಸರಪಳಿಯ ಮೇಲಿನ ಬೆರಳಿನ ಗುರುತು ಅವಳದಲ್ಲ."

"ಹ್ಞಾಂ."

"ಏಕೆ ಬೆಚ್ಚಿಬೀಳುತ್ತೀರಿ. ಜರ್ನಲಿಸ್ಟ್ ಶೇಷಗಿರಿಯ ಬಳಿ ಸರಪಳಿಯ ಮೇಲಿದ್ದ ಬೆರಳಿನ ಗುರುತಿನ ಫೋಟೋಗ್ರಾಫ್ ಇದೆ. ಇದೊಂದೆ ಮಾತಿನಿಂದ ಪೋಲಿಸರು ಲೀಲಾದೇವಿಯ ಮೇಲೆ ಹಾಕಿರುವ ಕೇಸು ಎಗರಿಬೀಳುತ್ತದೆ. ಪೋಲಿಸರು, ಲೀಲಾದೇವಿಯ ಮೇಲೆ ಹಾಕಿರುವ ಚಾರ್ಜ್‌ಶೀಟ್‌ನಲ್ಲಿ ಅವಳು ಸರಪಳಿ ಎಳೆದು ರೈಲು ನಿಲ್ಲಿಸಿದಳು ಎಂದು ನಮೂದಿಸಿದರೋ ಅಂದೇ ಲೀಲಾದೇವಿ ಕೇಸಿನಲ್ಲಿ ಗೆದ್ದಳು. ಅದಲ್ಲವೆ, ಸೂಕ್ಷ್ಮವಾದರೂ ಅತಿ ಮುಖ್ಯವಾದ, ಲೀಲಾದೇವಿಯನ್ನು ಕೊಲೆಪಾತಕಿಯಲ್ಲ ಎಂದು ಘಂಟಾಘೋಷವಾಗಿ ಸಾರುವ ಮತ್ತೊಂದು ಪ್ರಬಲ ಸಾಕ್ಷ್ಯವಿದೆ."

"ಅದೇನು ?"

"ಕೊಲೆ ಮಾಡಿದ ವ್ಯಕ್ತಿ ಮೋಹನ್‌ಚಂದ್ರ ಜೇಬಿಗೆ ಕೈಹಾಕಿದಾಗ ಅವನ ಕೈಗೆ ಮತ್ತು ಬಟ್ಟೆಗೆ ರಕ್ತ ಅಂಟಿಕೊಂಡಿತ್ತು. ಅದನ್ನು ಹೋಗಲಾಡಿಸಲು ಕೊಲೆಮಾಡಿದ ವ್ಯಕ್ತಿ ಡಿಟರ್‌ಜೆಂಟನ್ನು ಉಪಯೋಗಿಸಿದ. ಅದರ ಕಾರ್ಕು ಮತ್ತು ಡಿಟರ್‌ಜೆಂಟನಲ್ಲಿ ಅದ್ದಿದ ಕರ್ಚೀಫ್ ದೊರೆತಿದೆ. ಲೀಲಾದೇವಿಯ ಕರ್ಚೀಫ್ ಅವಳ ವ್ಯಾನಿಟಿ ಬ್ಯಾಗಿನಲ್ಲಿತ್ತು. ವ್ಯಾನಿಟಿಬ್ಯಾಗ್ ಹೆಣದ ಮೇಲೆ ಬಿದ್ದಿತ್ತು. ಆ ಕರ್ಚೀಫ್ ಅವಳದಲ್ಲ. ಕರ್ಚೀಫಿನ ಮೇಲೆ ಬೆರಳಿನ ಗುರುತುಗಳಿವೆ."

ಶಂಕರ್‌ನ ಮಾತಿನಿಂದ ಬಾಲನ್‌ರವರ ತಲೆಯ ಕಾವು ಕೊಂಚ ಇಳಿಯಿತು. ಅವರಿಗೆ ಮೊದಲಿನಿಂದಲೂ ಶಂಕರ್‌ನ ಮೇಲೆ ಮತ್ಸರ ಮೂಡಿಬಂದಿತ್ತು. ಖಾಸಗೀ ಪತ್ತೇದಾರಿಕೆ ನಡೆಸುವವರು, ಕೊಲೆಗಾರರಿಂದ ಹಣವನ್ನು ತೆಗೆದುಕೊಂಡು ತಮ್ಮ ಬುದ್ಧಿಶಕ್ತಿಯಿಂದ ನಿಜವಾದ ಅಪರಾಧಿಯನ್ನು ಉಳಿಸಿ ನಿರಪರಾಧಿಗಳಿಗೆ ಗಲ್ಲುಗಂಭವನ್ನು ಹತ್ತಿಸುತ್ತಾರೆ ಎಂಬ ಭಾವ ಅವರ ಮನಸ್ಸಿ

ನಲ್ಲಿ ಮೂಡಿತ್ತು.

"ಲೀಲಾದೇವಿ ಕೊಲೆಪಾತಕಿಯಲ್ಲ. ಈ ಅಲ್ಲೋಲ ಕಲ್ಲೋಲಗಳ ಮೂಲ "ಜೈಪ್ರಕಾಶ್" ವಜ್ರ ಎಂದು ನಾನು ಸಾಬೀತು ಮಾಡಬಲ್ಲೆ."

ತುಂಬಿದ ಆತ್ಮವಿಶ್ವಾಸದಿಂದ ಶಂಕರ್ ನುಡಿದ.

ಬಾಲನ್‌ರವರು ಅವನ ಮಾತಿಗೆ ಮರುತ್ತರ ಕೊಡಲಿಲ್ಲ. ಸೀದಾ ಹೊರಗೆ ಹೊರಟರು.

ಶಂಕರ್ ಅವರ ಆ ವರ್ತನೆಯನ್ನು ನೋಡಿ ಸುಮ್ಮನೆ ನಕ್ಕುಬಿಟ್ಟ.

"ಈ ಮೊಕದ್ದಮೆಯಲ್ಲಿ ನನ್ನ ವಿಜಯದ ಪಾಲುದಾರ ಜರ್ನಲಿಸ್ಟ್ ಶೇಷಗಿರಿ" ಎಂಬ ಭಾವ ಶಂಕರನ ಹೃದಯದಲ್ಲಿ ಮೂಡಿದ್ದಿತು.

೧೪

'ನಮ್ಮ ನಾಡಿ' ಪತ್ರಿಕೆಯಲ್ಲಿ ಸುದ್ದಿಯು ಪ್ರಕಟವಾಗಿತು.

"ಹಲವು ದಿನಗಳ ಹಿಂದೆ ಜನತಾ ಎಕ್ಸ್‌ಪ್ರೆಸ್ಸಿನಲ್ಲಿ ಶ್ರೀನಗರದ ಶ್ರೀಮಂತ ರಾದ ಮೋಹನ್‌ಚಂದ್‌ರವರ ಕೊಲೆಯಾಯಿತು.

"ಕೊಲೆಯಾದೊಡನೆ ಯಾರೋ ಸರಪಳಿ ಎಳೆದು ರೈಲು ನಿಲ್ಲಿಸಿ ಓಡಿ ಹೋಗಿ ಕಾರು ಹತ್ತಿದರು

"ಹಾಗೆ ಓಡಿಹೋದವಳು ಸುಪ್ರಸಿದ್ಧ ಚಲನಚಿತ್ರ ನಟಿ ಲೀಲಾದೇವಿ ಎಂದು ಹೆಣದ ಮೇಲಿದ್ದ ವ್ಯಾನಿಟಿಬ್ಯಾಗ್‌ನಿಂದ ತಿಳಿಯಿತು. ಅವಳೇ ಕೊಲೆ ಪಾತಕಿ ಎಂದು ಪೋಲೀಸಿನವರು ಅವಳಿಗಾಗಿ ಹುಡುಕುತ್ತಿದ್ದರು.

"ನಗರದ ವಿಖ್ಯಾತ ಪತ್ತೇದಾರ್ ಶಂಕರ್ ಮತ್ತು ಜರ್ನಲಿಸ್ಟ್ ಶೇಷಗಿರಿ ಯವರು—ಲೀಲಾದೇವಿ ಕೊಲೆಪಾತಕಿಯಲ್ಲ, ಈ ಕೊಲೆಯ ಉದ್ದೇಶ್ಯ ಅತ್ಯ ಮೂಲ್ಯವಾದ "ಜೈಪ್ರಕಾಶ್" ಎಂಬ ವಜ್ರ ಎಂಬುದನ್ನು ಪರಿಶೋಧಿಸಿದ್ದಾರೆ.

"ಲೀಲಾದೇವಿ ಕೊಲೆಪಾತಕಿಯಲ್ಲ; ಹಾಗಾದರೆ ಕೊಲೆಮಾಡಿದವರು ಯಾರು? ಶಂಕರ್‌ರವರ ಅಪಾರ ಬುದ್ಧಿಶಕ್ತಿ ಅದನ್ನು ಶೀಘ್ರದಲ್ಲಿಯೇ ಕಂಡು ಹಿಡಿಯಲಿದೆ."

ರಾಮಚಂದ್ ಸುದ್ದಿಯ ವಿವರವನ್ನು ಓದಿದ.

ಶಂಕರ್ ಏನನ್ನೋ ಆಲೋಚಿಸುತ್ತಿದ್ದ.

ಅವನ ಮಂಕಾಗಿದ್ದ ಮುಖದಲ್ಲಿ ಆಶಾಕಿರಣ ಮೂಡಿತು.

"ಈ ಮೊಕದ್ದಮೆಯನ್ನು ಗೆಲ್ಲುತ್ತೇನೆ."

—ಇದು ಶಂಕರ್‌ನ ಬಾಯಿನಿಂದ ಹೊರಟ ಮಾತು.

ಶಂಕರ್‌ನ ಈ ಬಗೆಯ ವರ್ತನೆ ರಾಮಚಂದ್‌ಗೆ ಅರ್ಥವಾಗಲಿಲ್ಲ.

"ಏನು ಸಮಾಚಾರ ಶಂಕರ್?"

"ನಾನು ಈಗ ಒಂದು ಕಡೆ ಹೋಗಬೇಕು."

ಶಂಕರ್‌ನ ಮಾತು ಮುಗಿಯುವ ಹೊತ್ತಿಗೆ ಚಂದ್ರಕುಮಾರ್ ಬಂದನು.

"ಬನ್ನಿ ಶಂಕರ್."

"ಎಲ್ಲಿಗೆ?"

"ಚರ್ಚ್‌ಗೇಟಿನ ಬಳಿ ಇರುವ ಬಾಂಬೆ ಕ್ಲಬ್‌ನಲ್ಲಿ ಡ್ಯಾನ್ಸ್ ಇದೆ."

"ಇಲ್ಲಿ ನನಗೆ ಕೆಲಸವಿದೆ."

ರಾಮಚಂದ್ ಮತ್ತು ಚಂದ್ರಕುಮಾರ್ ಬಾಂಬೆ ಕ್ಲಬ್ಬಿನ ಕಡೆ ಹೊರಟರು.

ಶಂಕರ್ ಮೈಕ್ರೋಪೋಲೋ ಸಿಗರೇಟನ್ನು ಹಚ್ಚಿದ.

ಅವನ ತಲೆಯತುಂಬಾ ಆಲೋಚನೆಗಳು. ಬಾಯಿತುಂಬಾ ಹೊಗೆ.

ತಕ್ಷಣ ಎದ್ದು ಬಾಗಿಲಿಗೆ ಬೀಗ ಹಾಕಿದ.

* * * *

ಅದೊಂದು ಭವ್ಯವಾದ ಬಂಗಲೆ.

ಶಂಕರ್ ನೋಡಿದ—ಬಂಗಲೆಗೆ ಮಾಸ್ಟರ್‌ಲಾಕ್ ಬೀಗ ತಗುಲಿಸಿದ್ದಿತು. ಗೇಟಿನ ಬಾಗಿಲು ಹಾಕಿತ್ತು. ರಸ್ತೆಯಲ್ಲಿ ಜನಸಂದಣಿ ಇರಲಿಲ್ಲ.

ಅತ್ತ ಇತ್ತ ತಿರುಗಿ ನೋಡಿದ. ರಸ್ತೆಯಲ್ಲಿ ಯಾರೂ ಕಂಡುಬರಲಿಲ್ಲ. ತಕ್ಷಣ ಕಾಂಪೌಂಡ್ ಹಾರಿ ಮನೆಯನ್ನು ಪ್ರವೇಶಿಸಿದ. ಸೈಲೆನ್ಸರ್ ಅಳವಡಿಸಿದ ರಿವಾಲ್ವರಿನಿಂದ ಬೀಗಕ್ಕೆ ಗುಂಡು ಹಾರಿಸಿದ.

ಬೀಗ ಒಡೆದು ಕೆಳಗೆ ಬಿದ್ದಿತು.

ಒಳಗೆ ಹೋಗಿ ಬಾಗಿಲನ್ನು ಭದ್ರಪಡಿಸಿ ಮನೆಯನ್ನು ಶೋಧಿಸಲಾರಂಭಿಸಿದ.

ಒಂದು ಡ್ರಾಯರಿನಲ್ಲಿ ಅವನಿಗೊಂದು ಪತ್ರ ಸಿಕ್ಕಿತು. ಶಂಕರ್ ಪತ್ರವನ್ನು ತೆಗೆದು ಓದಿದ.

ಅಚ್ಚರಿಪಟ್ಟು ಮತ್ತೊಮ್ಮೆ ಕೂಲಂಕಷವಾಗಿ ಓದಿದ.

"…………ನಿಗೆ,

ನಾವು "ಜೈಪ್ರಕಾಶ್" ವಜ್ರವನ್ನು ಕೊಂಡುಕೊಳ್ಳುವುದಾಗಿ ಬೊಂಬಾಯಿ ವಾಲನಿಗೆ ತಿಳಿಸಿದ್ದೆವು. ಅವನು ಆ ವಜ್ರವನ್ನು ನಮಗೆ ಕೊಡುವುದಾಗಿ ಹೇಳಿದ್ದ. ಆದರೆ ಅವನು ಕೊಲೆಯಾಗಿಹೋದ. ಅವನು ಯಾಕೆ ಕೊಲೆ ಯಾದ? ಕೊಲೆ ಮಾಡಿದವರ್ಯಾರು? ಎಂಬ ವಿಷಯ ನಮಗೆ ಮುಖ್ಯವಲ್ಲ. ಅವನ ಕೊಲೆಯಿಂದ ನಮಗೆ ಯಾವ ವಿಧವಾದ ನಷ್ಟವೂ ಇಲ್ಲ. ನಮಗೆ ಬೇಕಾಗಿರುವುದು "ಜೈಪ್ರಕಾಶ್" ವಜ್ರ. ಅದು ನಿಮ್ಮ ಬಳಿ ಇದೆ ಎಂಬ ವಿಷಯ ನಮ್ಮ ಗೂಢಚಾರರಿಂದ ತಿಳಿದುಬಂದಿದೆ. ಅದನ್ನು ನಮಗೆ ಮಾರು ವುದರಿಂದ ನಿನಗೆ ಯಾವ ಅಪಾಯವೂ ಇಲ್ಲ. ಆ ವಜ್ರ ಭಾರತದಿಂದಾಚೆಗೆ ಹೋಗುತ್ತದೆ.

"ಹಾಗೇ ಮಾರಲು ಇಷ್ಟವಿದ್ದರೆ ಅದರ ಬೆಲೆ ಮುಂತಾದುವುಗಳ ವಿಷ ಯಕ್ಕೆ ಒಂದು ಕಾಗದ ಬರೆದಿಡುವುದು. ಈ ದಿನ ರಾತ್ರಿ ನಿಮ್ಮ ಮನೆಯ ಮುಂದೆ ಒಂದು ಕಾರು ಬರುತ್ತದೆ. ಆ ಕಾರಿನಲ್ಲಿ ಒಬ್ಬ ಮುದುಕಿ ಕುಳಿತಿರು ತ್ತಾಳೆ. ಆ ಪತ್ರವನ್ನು ಮುದುಕಿಯ ಕೈಗೆ ಕೊಡುವುದು.

ಇತಿ,

ಅಪರಿಚಿತ ಮಿತ್ರ."

ಶಂಕರ್ ಪತ್ರ ಓದಿದಮೇಲೆ ಅದನ್ನು ಜೇಬಿನಲ್ಲಿಟ್ಟುಕೊಂಡ. ಆ ಮನೆ ಯಲ್ಲಿ "ಜೈಪ್ರಕಾಶ್" ವಜ್ರವಿದೆ. ಆ ಮನೆಯ ಮಾಲೀಕನೆ ಪಕ್ಕಾ ದಗಾ ಕೋರ. ಈ ಅಲ್ಲೋಲಕಲ್ಲೋಲಗಳ ಮೂಲ ಅವನೇ ಎಂದು ಶಂಕರ್ ಊಹೆಮಾಡಿದ್ದ. ಅವನ ಊಹಾ ಸರಪಳಿ ಸತ್ಯವಾಗಿತ್ತು. ಆ ಪತ್ರ—ಈ ಮನೆಯ ಮಾಲೀಕನೇ ನೀನು ಹುಡುಕುತ್ತಿರುವ ಠಕಾಯಿತಿ ಎಂದು ಸಾರಿ ಹೇಳುತ್ತಿತ್ತು.

ಶಂಕರ್ ಮನೆಯ ಹಿತ್ತಿಲ ಕಡೆ ಬಂದ.

ಅಲ್ಲಿ ಕೋಳಿಗಳು ಓಡಾಡುತ್ತಿದ್ದವು.

ಸುಮಾರು ಇಪ್ಪತ್ತು ಕೋಳಿಗಳಿದ್ದವು.

ಆ ಕೋಳಿಗಳ ಗುಂಪು ಆಶ್ಚರ್ಯವನ್ನುಂಟುಮಾಡಿತ್ತು.

ಎಲ್ಲಾ ಕೋಳಿಗಳ ಬಣ್ಣವೂ ಹೆಚ್ಚುಕಡಿಮೆ ಒಂದೇ ತರಹ ಇದ್ದಿತು.

ಆ ಕೋಳಿಗಳು ಹೆಚ್ಚುಕಡಿಮೆ ಒಂದೇ ವಯಸ್ಸಿನದಾಗಿತ್ತು.

—ಒಂದೇ ಬಣ್ಣ, ಒಂದೇ ವಯಸ್ಸಿನ ಇಪ್ಪತ್ತು ಕೋಳಿಗಳು! ಮನೆಯ ಯಜಮಾನನಿಗೆ ಕೋಳಿ ಸಾಕಣೆ ಹಾಬಿ ಇರಬಹುದೇ? ಶಂಕರ್ ವೈಕ್ರೋಪೋಲೋ ಸಿಗರೇಟು ಸೇದುತ್ತಾ ಆಲೋಚಿಸುತ್ತಿದ್ದ.

ಆ ಕೋಳಿಗಳು ಕಾಳುಗಳನ್ನು ತಿನ್ನುತ್ತಾ ಓಡಾಡುತ್ತಿದ್ದುವು.

ಆ ಒಂದೇ ಬಣ್ಣದ, ಒಂದೇ ವಯಸ್ಸಿನ ಕೋಳಿಗಳ ಗುಂಪು ನೋಟಕ್ಕೆ ಅಂದವಾಗಿತ್ತು.

ಶಂಕರ್ ಆ ಕೋಳಿಗಳ ಗುಂಪನ್ನೇ ನೋಡುತ್ತಿದ್ದ. ಅವನ ತಲೆಯಲ್ಲಿ ಯೋಚನೆಗಳು, ಕ್ಲಿಷ್ಟ ಸಮಸ್ಯೆಗಳು, ಬಾಯಿ ತುಂಬಾ ಸಿಗರೇಟಿನ ಹೊಗೆ.

ಶಂಕರ್ ನಿಂತಿದ್ದ. ಅರ್ಥವಾಗದ ಸಮಸ್ಯೆ ಅವನ ತಲೆಯನ್ನು ಬಿಸಿ ಮಾಡುತ್ತಿದ್ದುವು.

ಆ ಕೋಳಿಗಳು ಅವನ ತಲೆಯಲ್ಲಿ ಹೊಸ ಬೆಳಕನ್ನು ಹುಟ್ಟಿಸುವುದೇನೋ ಎಂಬ ಭಾವ ಆ ನೋಟದಲ್ಲಿತ್ತು.

ಚಂದ್ರಕುಮಾರ್ ಮಾಂಸಾಹಾರಿ.

ಆದರೆ ಅವನ ಬಂಗಲೆಯಲ್ಲಿ ಅಡಿಗೆ ಮನೆಯೇ ಇರಲಿಲ್ಲ. ಆದ್ದರಿಂದ ಅವನ ಮನೆಯಲ್ಲಿ ಯಾರೂ ಹೆಂಗಸರಿಲ್ಲ. ಅಂತೆಯೇ ಅಡುಗೆಯವರೂ ಇಲ್ಲ. ಅವನು ಹೋಟೆಲಿನಲ್ಲಿ ಊಟ ಮಾಡುತ್ತಾನೆ ಎಂಬುದು ಶಂಕರ್‌ನ ತಲೆಯಲ್ಲಿ ಹೊಳೆಯಿತು.

ಆದರೆ....ಆ ಕೋಳಿಗಳು.

ಕೋಳಿಗಳನ್ನು ಸಾಕುವುದು ಅವನ ಹಾಬಿ ಇರಬಹುದು. ಒಂದೇ ಬಣ್ಣ–ಒಂದೇ ವಯಸ್ಸಿನ–ಒಂದೇ ಎತ್ತರದ ಕೋಳಿಗಳನ್ನು ಸಾಕಿರಬಹುದು.

ಆ ವಿಷಯವಿವರಣೆ ಶಂಕರ್‌ನ ಮನಸ್ಸಿಗೆ ಸರಿತೋರಲಿಲ್ಲ. ಆ ಕೋಳಿಗಳ ಸಾಕುವಿಕೆಯಲ್ಲಿ ಯಾವುದೋ ಒಂದು ರಹಸ್ಯವಿದೆ ಎಂದು ಅವನ ತಲೆಯಲ್ಲಿ ಒಂದು ಸಣ್ಣ ಕೂಗೆದ್ದಿತು.

ಆ ಅಮೋಘ ರಹಸ್ಯವೇನು?

ಅದೇ ಅವನನ್ನು ಕಾಡುತ್ತಿದ್ದ ಕ್ಲಿಷ್ಟ ಸಮಸ್ಯೆ

ಆ ಕೋಳಿಯ ಗುಂಪನ್ನು ಕಣ್ಣು ನೋಡುತ್ತಿತ್ತು.

ತಲೆ ಕೋಳಿಗಳ ಹಿಂದಿರುವ ರಹಸ್ಯವನ್ನು ಆಲೋಚಿಸುತ್ತಿತ್ತು.

ಶಂಕರ್ ಮತ್ತೆ ಮನೆಯನ್ನು ಪ್ರವೇಶಿಸಿದ. ಒಂದು ಕತ್ತಲು ಕೋಣೆಯನ್ನು ಪ್ರವೇಶಿಸಿದ.

ಆ ಕೊಠಡಿಯ ಮೂಲೆಯಲ್ಲಿ ಒಂದು ದೊಡ್ಡ ಟಾರಿನ ಡ್ರಮ್ಮನ್ನು ಇಡಲಾಗಿತ್ತು. ಶಂಕರ್ ತನ್ನ ಬಳಿ ಇದ್ದ ಟಾರ್ಚಿನ ಸಹಾಯದಿಂದ ಕೊಠಡಿಯಲ್ಲಿ ಬೆಳಕನ್ನುಂಟುಮಾಡಿದ.

ಡ್ರಮ್ಮಿನಲ್ಲಿ ನೋಡಿದ. ಅದು ಖಾಲಿಯಾಗಿತ್ತು.

ಶಂಕರ್ ಡ್ರಮ್ಮನ್ನು ಜರುಗಿಸಿದ.

ಗೋಡೆಯ ಮೇಲೆ ಒಂದು ಕಬ್ಬಿಣದ ಬಳೆ ಕಾಣಿಸಿತು. ಶಂಕರ್ ಅದನ್ನು ಎಳೆದ.

ಮೂಲೆಯಲ್ಲಿ ಬಾಯಿ ಬಿಟ್ಟಿತು. ಸುರಂಗ ಕಂಡುಬಂದಿತು. ಶಂಕರ್ ಸುರಂಗವನ್ನು ಪ್ರವೇಶಿಸಿದ. ಆ ಉದ್ದವಾದ ಸುರಂಗದಲ್ಲಿ ಬಹಳ ಹೊತ್ತು ನಡೆದ. ಮತ್ತೆ ಮೇಲಕ್ಕೆ ಬಂದ.

ಆ ಸುರಂಗದ ಕೊನೆ ಸುಟ್ಟುಹೋದ ಮಾತುಂಗದ ಮನೆಯನ್ನು ತಲುಪಿತ್ತು.

ಇವನೇ ಬೊಂಬಾಯಿನ ದಗಾಕೋರ ಎಂಬುದರಲ್ಲಿ ಯಾವ ಸಂಶಯವೂ ಇರಲಿಲ್ಲ.

ಆ ದಗಾಕೋರನ್ಯಾರು? ಎಂಬುದು ಶಂಕರ್‌ಗೆ ತಿಳಿಯಿತು. ಅದನ್ನು ಸ್ಥಿರಪಡಿಸಲು ಅವನ ಮನೆಯಲ್ಲಿದ್ದ ಕೆಲವು ಪದಾರ್ಥಗಳ ಮೇಲಿನ ಕೈಗುರುತನ್ನು ಕಂಡುಹಿಡಿಯಲು ಆ ಪದಾರ್ಥಗಳನ್ನು ತೆಗೆದುಕೊಂಡ. ಆ ಮನೆಯಲ್ಲಿ ದಗಾಬಾಜಿಗಳ ವ್ಯವಹಾರಿಕ ಪತ್ರವೊಂದು ಸಿಕ್ಕಿತು.

ಆದರೆ "ಜೈಪ್ರಕಾಶ್" ಎಲ್ಲಿ?

ಅಂಥ ಅಮೂಲ್ಯ ವಜ್ರವನ್ನು ಅತ್ಯಂತ ಗುಪ್ತಸ್ಥಳದಲ್ಲಿಟ್ಟಿರುತ್ತಾನೆ.

ಅದನ್ನು ಶೋಧಿಸುವುದು ಹೇಗೆ?

ಅದೇ ಶಂಕರ್‌ನ ತಲೆಯನ್ನು ಕೆಡಿಸುತ್ತಿದ್ದ ಕಠಿಣ ಸಮಸ್ಯೆ.

ಮತ್ತೆ ಶಂಕರ್ ಬಂದ ದಾರಿಯಲ್ಲೇ ಹಿಂತಿರುಗಿದ.

ಮನೆಯ ಬಾಗಿಲನ್ನು ಮೊದಲಿನಂತೆ ಹಾಕಿ, ತನ್ನ ಜೇಜಿನಲ್ಲಿದ್ದ ಅದೇ ತರಹ ಬೀಗವನ್ನು ಒತ್ತಿ ಮತ್ತೆ ರಾಮಚಂದ್ರ್‌ನ ಮನೆಗೆ ಬಂದು ಸಿಗರೇಟು ಹಚ್ಚಿ ಭಾವಸಮಾಧಿಯಲ್ಲಿ ಲೀನನಾದ.

ರಾಮಚಂದ್ ಮತ್ತು ಚಂದ್ರಕುಮಾರರ ಆಗಮನ ಅವನ ಭಾವ ಸಮಾಧಿಯನ್ನು ಭಗ್ನಪಡಿಸಿತು.

"ಏನು ಶಂಕರ್ ಸಂಜೆಯಿಂದ ಎಲ್ಲೂ ಹೋಗಲೇ ಇಲ್ಲವೇ ?"

"ಇಲ್ಲ."

"ಪತ್ತೇದಾರರು ಯಾಕೋ ಬಹಳ ಮಂಕಾಗಿದ್ದಾರಲ್ಲ."

ಚಂದ್ರಕುಮಾರ್ ಹಾಸ್ಯ ಬೆರೆತ ಧ್ವನಿಯಲ್ಲಿ ನುಡಿದ.

ಶಂಕರ್ ಅವನ ಮಾತಿಗೆ ಉತ್ತರ ಕೊಡುವುದರ ಬದಲು ಸುಮ್ಮನೆ ನಕ್ಕುಬಿಟ್ಟ.

"ನಿಮ್ಮ ಮೊಕದ್ದಮೆ ಮುಗಿಯಿತೇ ಶಂಕರ್ ?"

"ಅಂದೇ ಮುಗಿಯಿತು."

"ಕೊಲೆಗಾರನ್ಯಾರು ?"

"ಅದು ನನಗೆ ತಿಳಿಯದು."

"ಮೊಕದ್ದಮೆ ಹೇಗೆ ಮುಗಿಯಿತು ?"

"ಲೀಲಾದೇವಿ ಕೊಲೆಪಾತಕಿಯಲ್ಲ ಎಂಬುದನ್ನು ಸ್ಥಿರಪಡಿಸಲು ಸಾಕ್ಷಿಯನ್ನು ಹುಡುಕುವ ಕಾರ್ಯಕ್ಕೆ ನಾನು ಪ್ರವೇಶಿಸಿದೆ. ಅಷ್ಟರಲ್ಲಿ ನನ್ನ ಮಾನ್ಯ ಮಿತ್ರ ಅರುಗೇಂದ್ರನು ಕಳ್ಳರ ಮುಷ್ಟಿಯಲ್ಲಿ ಸಿಕ್ಕಿಹಾಕಿಕೊಂಡ. ಅವನನ್ನು ಬಿಡಿಸಲು ಬೊಂಬಾಯಿನ ತನಕ ಬರಬೇಕಾಯಿತು. ಲೀಲಾದೇವಿ ಕೊಲೆಪಾತಕಿಯಲ್ಲ ಎಂಬುದು ಸ್ಥಿರವಾದಂತಾಯಿತು. ಅರುಗೇಂದ್ರನ ಬಿಡುಗಡೆಯಾಯಿತು. ಅಲ್ಲಿಗೆ ನನ್ನ ಕಾರ್ಯಗಳು ಮುಗಿದಂತಾಯಿತು."

"ನಿಜವಾದ ಅಪರಾಧಿ ಯಾರು ? 'ಜೈಪ್ರಕಾಶ್' ವಜ್ರವೆಲ್ಲಿ ? ಅದನ್ನು ಕಂಡುಹಿಡಿಯುವುದಿಲ್ಲವೇ ?"

"ಅದು ಬಹಳ ಅಪಾಯಕಾರಿಯಾದ ಕೆಲಸ. ಅದನ್ನು ತಲೆಗೆ ಹಚ್ಚಿಕೊಂಡು ತಲೆ ಕೆಡಿಸಿಕೊಳ್ಳಲು ಸಧ್ಯದಲ್ಲಿ ನನಗೆ ಇಷ್ಟವಿಲ್ಲ. ನಾನು ಸ್ವಲ್ಪ ದಿನಗಳಲ್ಲೇ ವಿಶ್ರಾಂತಿಗಾಗಿ ಸ್ವಿಜ್ಜರ್ಲೆಂಡ್‌ಗೆ ಹೋಗಬೇಕೆಂದಿದ್ದೇನೆ. ನಾನು

ಬರುವ ತನಕ ಪೋಲೀಸರು ಜಯಶೀಲರಾಗದಿದ್ದಲ್ಲಿ ನಾನು ಈ ಮೊಕದ್ದಮೆಯ ಉತ್ತರಾರ್ಧವನ್ನು ಪೂರೈಸಲು ಕಾರ್ಯರಂಗಕ್ಕಿಳಿಯುತ್ತೇನೆ."

"ಮತ್ತೇಕೆ ಮಧ್ಯಾಹ್ನದಿಂದ ತಲೆ ಕೆಡಿಸಿಕೊಂಡು ಆಲೋಚಿಸುತ್ತಾ ಕುಳಿತುಕೊಂಡಿದ್ದೀರಿ."

"ನಾನು ಈ ಮೊಕದ್ದಮೆಯ ಬಗ್ಗೆ ಆಲೋಚಿಸುತ್ತಿಲ್ಲ. ಯಾವುದೋ ಒಂದು ನನ್ನ ಪರ್ಸನಲ್ ವಿಷಯದ ಬಗ್ಗೆ ಆಲೋಚಿಸುತ್ತಿದ್ದೇನೆ."

"ನಾನು ಇನ್ನು ಬರುತ್ತೇನೆ ಪತ್ತೇದಾರರೇ. ಊರಿಗೆ ಹೋಗುವುದರಲ್ಲಿ ಮತ್ತೊಮ್ಮೆ ಬಂದು ಕಾಣುತ್ತೇನೆ. ನಮಸ್ಕಾರ."

"ನಮಸ್ಕಾರ."

ಚಂದ್ರಕುಮಾರ್ ಮನೆಯ ಕಡೆ ಹೋದರು.

ಶಂಕರ್ ಟೆಲಿಫೋನಿನ ರಿಸೀವರನ್ನು ಕೈಗೆ ತೆಗೆದುಕೊಂಡ.

"ಹಲೋ."

"ಹಲೋ ಯಾರು ಮಾತನಾಡುತ್ತಾ ಇರುವುದು, ಎಲ್ಲಿಂದ ?"

"ನಾನು ಪತ್ತೇದಾರ್ ಶಂಕರ್ ಮಾತಾಡುತ್ತಿದ್ದೇನೆ."

"ಹಲೋ ಶಂಕರ್ ಏನು ವಿಷಯ ?"

"ಗೋಪಾಲ್ ತಾನೇ ಮಾತನಾಡುತ್ತಾ ಇರುವುದು."

"ಹೌದು ಶಂಕರ್."

"ಸ್ವಲ್ಪ ಅರ್ಜೆಂಟ್ ಕೆಲಸವಿದೆ, ರಾಮಚಂದ್‌ನ ಮನೆಗೆ ಈಗಲೇ ಬಾ."

"ಏನು ವಿಷಯ ಸೂಕ್ಷ್ಮವಾಗಿ ಹೇಳಪ್ಪ."

"ಫೋನಿನಲ್ಲಿ ಹೇಳುವ ವಿಷಯವಲ್ಲ. ಹತ್ತು ನಿಮಿಷಗಳಲ್ಲಿ ಇಲ್ಲಿಗೆ ಬರಬೇಕು."

"ಆಗಲಿ ಬರ್ತೀನಪ್ಪ."

—ಶಂಕರ್ ರಿಸೀವರನ್ನು ಕೆಳಗಿಟ್ಟು, ಮೈಕ್ರೊಫೋಲೋ ಹಚ್ಚಿ, ಫಿಂಗರ್ ಪ್ರಿಂಟ್ ಎಕ್ಸ್‌ಪರ್ಟ್ ಗೋಪಾಲನ ಬರುವಿಕೆಯನ್ನು ನಿರೀಕ್ಷಿಸುತ್ತಾ ಕುಳಿತುಕೊಂಡಿದ್ದ.

ಶಂಕರ್‌ನ ನಡವಳಿಕೆ, ಕಾರ್ಯ ಕಲಾಪಗಳೆಲ್ಲಾ ರಾಮಚಂದ್‌ಗೆ ಅರ್ಥವಾಗದ ಸಮಸ್ಯೆಗಳಾಗಿಯೇ ಉಳಿದಿದ್ದುವು. ರಾಮಚಂದ್ ಹಾಸಿಗೆ

ಹಾಸಿ ಮಲಗಿದ.

ಅಷ್ಟರಲ್ಲಿ ಗೋಪಾಲ್ ಪ್ರವೇಶಿಸಿದ.

"ಬಾ ಗೋಪಾಲ್ ಕುಳಿತುಕೊ."

"ಏನಯ್ಯಾ ಅರ್ಜೆಂಟಾಗಿ ಹೇಳಿ ಕಳುಹಿಸಿ, ಸಿಗರೇಟು ಸೇದುತ್ತಾ ಕುಳಿತುಕೊಂಡೆ. ನೀನೊಂದು ವಿಚಿತ್ರ ಮೃಗ ಕಾಣಯ್ಯ. ಕಾಸ್ ಬಂಗಲೆ ಯಾವುದಾದರು ಬೋನು ಖಾಲಿಯಾದರೆ, ನಿನಗೆ ವಿಷಯ ಹೇಳುತ್ತೇನೆ."

ಶಂಕರ್ ಅವನ ಮಾತಿಗೆ ಮುಗುಳು ನಗೆ ನಕ್ಕು ಸಿಗರೇಟು ಸೇದುತ್ತಾ ಮೊದನಂತೆಯೇ ಕುಳಿತಿದ್ದ.

"ಮಾತನಾಡಯ್ಯಾ ಶೇರ್‌ಲಾಕ್ಸ್ ಹೋಮ್ಸ್."

"ನಿನ್ನಿಂದ ಈಗಲೇ ಒಂದು ತುರ್ತು ಕೆಲಸವಾಗಬೇಕಾಗಿದೆ ಗೋಪಾಲ್."

"ಅದೇನು ಹೇಳಪ್ಪ ಪೀಟಿಕೆ ಸಾಕು."

"ಈ ರಾತ್ರಿ ನಾನು ನಿನ್ನೊಡನೆ ಲ್ಯಾಬೋರೇಟರಿಗೆ ಬರುತ್ತೇನೆ. ಈಗಲೇ ರಿಸಲ್ಟ್ ಹೇಳಬೇಕು."

"ಆಗಲಿ."

ಶಂಕರ್ ತನ್ನ ಜೇಬಿನಿಂದ—ಜನತಾ ಎಕ್ಸ್‌ಪ್ರೆಸ್ಸಿನಲ್ಲಿ ಜರ್ನಲಿಸ್ಟ್ ಶೇಷಗಿರಿಗೆ ಸಿಕ್ಕಿದ ಕರ್ಚೀಫ್, ಡಿಟರ್‌ಜೆಂಟಿನ ಶೀಶೆಯ ಕಾರ್ಕ್ ಮುಂತಾದುವನ್ನು ಕೊಟ್ಟ.

ರೈಲ್ವೇ ಸರಪಳಿಯ ಮೇಲಿದ್ದ ಕೈಬೆರಳಿನ ಗುರ್ತಿನ ಫೋಟೋವನ್ನು ಕೊಟ್ಟ.

ಇವುಗಳ ಮೇಲೆಲ್ಲಾ ಇರುವ ಬೆರಳಿನ ಗುರುತುಗಳು ಒಬ್ಬನೇ ವ್ಯಕ್ತಿಯದು.

"ಸರಿ."

ಶಂಕರ್ ತನ್ನ ಪೆಟ್ಟಿಗೆಯಿಂದ ಒಂದು ಗಾಜಿನ ಗ್ಲಾಸು ತೆಗೆದ.

"ಇವುಗಳ ಮೇಲಿರುವ ಬೆರಳಿನ ಗುರುತಿನ ಫೋಟೋಗ್ರಾಫ್ ಮಾಡಿ—ನಾನು ಮೊದಲು ಕೊಟ್ಟಿರುವ ವಸ್ತುಗಳ ಮೇಲಿರುವ ಬೆರಳಿನ ಗುರುತುಗಳು, ಈಗ ಕೊಟ್ಟಿರುವ ವಸ್ತುಗಳ ಮೇಲಿನ ಬೆರಳಿನ ಗುರುತುಗಳು ಒಬ್ಬನದೇ ಅಥವಾ

ಬೇರೆಬೇರೆಯವರದೆ ಎಂಬುದನ್ನು ಈಗಲೇ ಹೇಳಬೇಕು."

ಗೋಪಾಲ್ ಶಂಕರ್ ಕೊಟ್ಟ ವಸ್ತುಗಳನ್ನೆಲ್ಲಾ ಕೈಗೆ ಗ್ಲೌಸ್ ಹಾಕಿಕೊಂಡು ನೋಡಿದ.

"ನಡಿ ಲ್ಯಾಬೋರೇಟರಿಗೆ ಹೋಗೋಣ."

ಶಂಕರ್ ಮತ್ತು ರಾಮ್‌ಚಂದ್ ಕಾರು ಹತ್ತಿದರು.

ಕಾರು ಗೋಪಾಲನ ಲ್ಯಾಬೋರೇಟರಿಗೆ ಹತ್ತಿರ ಹೋದಾಗ ರಾತ್ರಿ ಹನ್ನೆರಡು ಮುಕ್ಕಾಲು ಘಂಟೆಯಾಗಿತ್ತು.

ಗೋಪ್‌ಲ್ ಆ ವಸ್ತುಗಳನ್ನು ತೆಗೆದುಕೊಂಡು ಲ್ಯಾಬೋರೇಟರಿಯನ್ನು ಪ್ರವೇಶಿಸಿ, ಒಂದು ಘಂಟೆಯನಂತರ ಹೊರಬಂದ.

"ಏನು ಗೋಪಾಲ್ ?"

"ಎಲ್ಲಾ ಪದಾರ್ಥಗಳ ಮೇಲಿರುವ ಗುರುತು ಒಂದೇ ವ್ಯಕ್ತಿಯದು."

"ಗುಡ್ ನ್ಯೂಸ್. ನಾನು ಈ ಮೊಕದ್ದಮೆಯಲ್ಲಿ ಗೆದ್ದೆ."

ಶಂಕರ್‌ನ ಮುಖದ ಮೇಲೆ ಜಯದ ಕಳೆ ಮಿನುಗಿತು.

"ಆ ಫಿಂಗರ್ ಪ್ರಿಂಟಿನ ಫೋಟೋಗ್ರಾಫನ್ನು ಮನೆಯ ಹತ್ತಿರ ಕಳಿಸಿಬಿಡು ಗೋಪಾಲ್. ನಿನ್ನ ದುಡ್ಡನ್ನು ಕಳುಹಿಸುತ್ತೇನೆ. ನಾನು ಬರುತ್ತೇನೆ."

ಶಂಕರ್ ಕಾರಿನಲ್ಲಿ ಕುಳಿತುಕೊಂಡು ರಾಮಚಂದ್‌ನ ಮನೆಯ ಕಡೆ ಹೊರಟ.

೧೫

ರಾತ್ರಿ ಸರಿಯಾಗಿ ನಿದ್ದೆಯಿಲ್ಲದ್ದರಿಂದ ಶಂಕರ್ ಹಾಸಿಗೆಯ ಮೇಲೆಯೇ ಹೊರಳಾಡುತ್ತಿದ್ದ. ಮೇಜಿನ ಮೇಲಿದ್ದ ಸಿಗರೇಟನ್ನು ತೆಗೆದುಕೊಂಡ. ಆ ದಿನದ ಮೊದಲ ಸಿಗರೇಟಿಗೆ ಅಗ್ನಿಸಂಸ್ಕಾರ ಮಾಡಿದ.

ಎರಡು ದಂ ಎಳೆದು ಹೊಗೆಬಿಟ್ಟ. ವಿಪರೀತವಾದ ಕೆಮ್ಮು ಬಂದಿತು. ಕಣ್ಣಿನಲ್ಲಿ ನೀರು ಬಂದಿತು.

"ಹಾಳು ಸಿಗರೇಟು ಎಂದಾದರೂ ನನ್ನನ್ನು ಕೊಂದುಬಿಡುತ್ತದೆ" ಎಂದು ಹೇಳುತ್ತಾ ಕೈಲಿದ್ದ ಸಿಗರೇಟನ್ನು ಆಷ್‌ಟ್ರೇಯಲ್ಲಿ ಹಾಕಿದ.

—ಸಿಗರೇಟು ಹೊಗೆಯಾಡುತ್ತಲೇ ಇದ್ದಿತು. ಅದರ ವಾಸನೆಯೂ ಬರುತ್ತಿತ್ತು.

—ಶಂಕರ್ ಅನೇಕ ದಿನಗಳಿಂದ ಮೈಕ್ರೋಪೋಲೋ ಸಿಗರೇಟು ಸೇದುತ್ತಿದ್ದ. ಅದರ ವಾಸನೆ ಘಾಟು ಮುಂತಾದುವುಗಳ ಅನುಭವ ಅವನಿಗಿತ್ತು. ಆದರೆ ಈ ದಿನ ಬೆಳಿಗ್ಗೆ ಹತ್ತಿಸಿದ ಸಿಗರೇಟು ಎಂದಿನಂತಿರಲಿಲ್ಲ.

ಶಂಕರ್‌ಗೆ ಏನೋ ಅನುಮಾನ ಬಂದಿತು.

ತಕ್ಷಣ ಬಾಯಿನಲ್ಲಿ ಬೆರಳು ಹಾಕಿಕೊಂಡು ಎರಡು ಬಾರಿ ವಾಂತಿ ಮಾಡಿದ.

ತಕ್ಷಣ ಡಾಕ್ಟರಿಗೆ ಫೋನು ಮಾಡಿದ.

ಡಾಕ್ಟರ್ ರಾಜಗೋಪಾಲ್ ತಕ್ಷಣ ಕಾರು ಹಾಕಿಕೊಂಡು ಬಂದರು.

ಶಂಕರ್ ವಿಷಯವನ್ನು ತಿಳಿಸಿದೊಡನೆ ಅವರು ವೈದ್ಯ ಪರೀಕ್ಷೆಗೆ ತೊಡಗಿದರು.

ಹತ್ತು ನಿಮಿಷಗಳಾದ ಮೇಲೆ ಅವರು ನೀಳವಾದ ನಿಟ್ಟುಸಿರೊಂದನ್ನು ಬಿಟ್ಟು "ಉಸ್ಸಪ್ಪಾ" ಎನ್ನುತ್ತಾ ಸೋಫಾದ ಮೇಲೆ ಕುಳಿತುಕೊಂಡರು.

"ಏನು ಡಾಕ್ಟರ್, ಸಮಾಚಾರ ?"

"ನೀನು ಅದೃಷ್ಟಶಾಲಿ ಶಂಕರ್ !"

"ಏನು ವಿಷಯ ಡಾಕ್ಟರ್ ?"

"ಆ ಸಿಗರೇಟನ್ನು ಇನ್ನೆರಡು ದಂ ಎಳೆದಿದ್ದರೆ ನೀನು ಇಷ್ಟುಹೊತ್ತಿಗೆ ಸ್ವರ್ಗದಲ್ಲಿರುತ್ತಿದ್ದೆ."

"ಕಾರಣ ?"

"ಯಾರೋ ಅಪಾಯಕಾರಿಯಾದ ಅಂದರೆ ವಿಷದ ಸೊಪ್ಪನ್ನು ಸಿಗರೇಟಿನ ಟೊಬ್ಯಾಕೋ ಜೊತೆಯಲ್ಲಿ ಹದವಾಗಿ ಬೆರೆಸಿದ್ದಾರೆ. ಆದರೆ ಮಿಶ್ರ ಮಾಡುವಾಗ ಅವರು ಸರಿಯಾಗಿ ಎಚ್ಚರಿಕೆಯಿಂದ ಮಾಡಿಲ್ಲ. ಹಾಗೆ ಅವರು ಎಚ್ಚರಿಕೆಯಿಂದ ಮಾಡಿದ್ದರೆ ಇಷ್ಟುಹೊತ್ತಿಗೆ ನೀನು ಸತ್ತುಹೋಗಿರುತ್ತಿದ್ದೆ. ಅವರು ಸರಿಯಾಗಿ ಮಿಶ್ರಮಾಡದೆ ಇದ್ದ ಕಾರಣ ಟೊಬ್ಯಾಕೋವಿನ ಹೆಚ್ಚು ಭಾಗ ಸಿಗರೇಟಿನ ಮುಂಭಾಗದಲ್ಲೂ, ವಿಷದ ಸೊಪ್ಪಿನ ಬಹಳ ಭಾಗ ಸಿಗರೇಟಿನ ಹಿಂಭಾಗದಲ್ಲೂ ಸೇರಿಕೊಂಡು ಬಿಟ್ಟಿದೆ. ನೀನು ಸಿಗರೇಟನ್ನು ಆ ಭಾಗದಿಂದ ಹಚ್ಚಿಕೊಂಡಿದ್ದು ಸೇದಿದ್ದಲ್ಲಿ ಒಂದೇ ದಂ ಎಳೆದ ಮೇಲೆ ಸತ್ತುಹೋಗುತ್ತಿದ್ದೆ. ನಿನ್ನ ಅದೃಷ್ಟವಶಾತ್ ನೀನು ಹಚ್ಚಿಕೊಂಡ ಭಾಗದಲ್ಲಿ ಟೊಬ್ಯಾಕೊ ಇದ್ದಿತು. ಆದ್ದರಿಂದಲೇ ನಿನ್ನನ್ನು ಅದೃಷ್ಟಶಾಲಿ ಎಂದು ಹೇಳಿದ್ದು."

"ನಾನು ಬರುತ್ತೇನೆ ಶಂಕರ್ ?"

"ನಮಸ್ಕಾರ ಡಾಕ್ಟರ್."

ಡಾಕ್ಟರ್ ರಾಜಗೋಪಾಲ್ ಹೊರಟುಹೋದರು.

ಶಂಕರ್ ಟೇಬಲ್ಲಿನ ಮೇಲಿದ್ದ ಸಿಗರೇಟನ್ನು ತೆಗೆದು ಒಂದುಕಡೆ ಹಾಕಿದ.

ಯಾರೋ ಶಂಕರ್‌ನನ್ನು ಸುಲಭವಾಗಿ ಕೊಲ್ಲಲು ರಾಮಚಂದ್‌ನ ಮನೆಯನ್ನು ಪ್ರವೇಶಿಸಿ, ಟೇಬಲ್ಲಿನ ಮೇಲಿದ್ದ ಒಳ್ಳೆಯ ಸಿಗರೇಟನ್ನು ತೆಗೆದುಹಾಕಿ, ಅದೇ ಸ್ಥಳದಲ್ಲಿ ವಿಷಮಿಶ್ರಿತ ಸಿಗರೇಟನ್ನಿಟ್ಟಿದ್ದಾರೆ.

ಹಾಗೆ ಮಾಡಿದ ವ್ಯಕ್ತಿಯಾರು ?

ಹಾಗೆ ಮಾಡಿದ ವ್ಯಕ್ತಿಯೇ ಬೊಂಬಾಯಿನ ಕಿಲಾಡಿ ದಗಾಕೋರ.

ಅವನೇ "ಜೈಪ್ರಕಾಶ್" ವಜ್ರದ ಕಳ್ಳ.

ಅವನೇ ಮೋಹನ್‌ಚಂದ್ರ ಕೊಲೆಗಾರ.

ಅವನೇ ಲೀಲಾದೇವಿಯಂಥ ಮುಗ್ಧೆಯಮೇಲೆ ಅಪರಾಧವನ್ನು ಹೊರಿಸಿ, ಆ ಸುಂದರಿಗೆ ಸಲ್ಲದ ತೊಂದರೆಗಳನ್ನು ಕೊಟ್ಟವನು.

ಅವನನ್ನು ಹಿಡಿಯಬೇಕು. ಅದೇ ಶಂಕರ್‌ನ ಮನಸ್ಸಿನಲ್ಲಿ ತುಂಬಿದ್ದ ಸಮಸ್ಯೆ. ಬಹಳ ಬೇಗ ಬಿಡಿಸಲ್ಪಡಲಿರುವ ಭಯಂಕರ ಸಮಸ್ಯೆ.

ಶಂಕರ್ ಅದೇ ಯೋಚನೆಯನ್ನು ಮಾಡುತ್ತಾ ಭಾವಿ ಸಮಾಧಿಯಲ್ಲಿ ಮಗ್ನನಾಗಿದ್ದ.

ರಾಮಚಂದನ ಆಗಮನ, ಅವನ ಭಾವಸಮಾಧಿಯನ್ನು ಭಗ್ನಪಡಿಸಿತು. ರಾಮಚಂದ್ ಟ್ರೇಯಲ್ಲಿ ಬಿಸ್ಕೆಟ್ ಮತ್ತು ಟೀಯನ್ನು ತೆಗೆದುಕೊಂಡು ಪ್ರವೇಶಿಸಿದ.

"ಏನು ಶಂಕರ್, ಗಾಢವಾಗಿ ಆಲೋಚಿಸುತ್ತಿದ್ದೀಯಾ ?"

"ನಿಮ್ಮ ಬೊಂಬಾಯಿನ ದಗಾಕೋರ ನನಗೆ ವಿಷದ ಸಿಗರೇಟನ್ನು ಕುಡಿಸಿ ಕೊಲ್ಲಲು ಪ್ರಯತ್ನಿಸಿದ. ಆದರೆ ನನಗೆ ಇನ್ನೂ ಆಯುಸ್ಸಿತ್ತು. ಅದೃಷ್ಟವೂ ಇತ್ತು, ಬದುಕಿಕೊಂಡೆ."

"ವಿಷದ ಸಿಗರೇಟು ನಿನ್ನ ಬಳಿ ಹೇಗೆ ಬಂದಿತು ?"

"ಅವನು ನಮ್ಮ ಮನೆಯನ್ನು ಪ್ರವೇಶಿಸಿ, ಟೀಬಲ್ಲಿನ ಮೇಲಿದ್ದ ಸಿಗರೇಟನ್ನು ಬಿಸಾಕಿ, ಅದೇ ಮಾದರಿ ಮೈಕ್ರೋಫೋಲೋವಿನೊಳಗೆ ವಿಷದ ಸೊಪ್ಪನ್ನು ತುಂಬಿ ನನ್ನ ಟೀಬಲ್ಲಿನ ಮೇಲಿಟ್ಟಿದ್ದಾನೆ."

"ಹ್ಞಾಂ."

"ಯಾಕೆ ಅಷ್ಟು ಆಶ್ಚರ್ಯಪಡುತ್ತೀಯ ರಾಮಚಂದ್ ?"

"ಅಪರಿಚಿತನೊಬ್ಬ ನಮ್ಮ ಮನೆಯನ್ನು ಪ್ರವೇಶಿಸಿ ಈ ರೀತಿ ಮಾಡಿದ್ದಾನೆ ಎಂದಮೇಲೆ ಅವನು ಸಾಮಾನ್ಯನಲ್ಲ."

ರಾಮಚಂದ್‌ನ ಆ ಮಾತಿಗೆ ಶಂಕರ್ ಮುಗುಳು ನಗೆಯನ್ನು ನಕ್ಕನು. ಆ ನಗುವಿನ ಅರ್ಥ ರಾಮಚಂದ್‌ಗೆ ಅರಿವಾಗಲಿಲ್ಲ."

"ಒಂದು ವಿಷಯ ರಾಮಚಂದ್ !"

"ಏನು ?"

"ಆ ದಗಾಕೋರ ನಾನು ಸತ್ತುಹೋಗಿದ್ದೇನೆ ಎಂದು ತಿಳಿದುಕೊಂಡಿರುತ್ತಾನೆ. ಧೈರ್ಯವಾಗಿ ಹೊರಗೆ ಓಡಾಡುತ್ತಾನೆ. ನಾನು ಬದುಕಿರುವ ವಿಷಯ ತಿಳಿದರೆ ಅವನು ಓಡಿಹೋಗಲು ಪ್ರಯತ್ನಿಸಬಹುದು. ನಾಳೆ ಬೆಳಿಗ್ಗೆವರೆಗೂ, ನಾನು ಬದುಕಿರುವ ವಿಷಯ ಗುಪ್ತವಾಗಿರಲಿ. ಯಾರಾದರೂ ನನ್ನನ್ನು ಕೇಳಿದರೆ, ನನಗೆ ತಿಳಿಯದು ಎಂದು ಹೇಳು. ನಾಳೆ ಬೆಳಿಗ್ಗೆ ಈ ಮೊಕದ್ದಮೆಗೆ ಪೂರ್ಣವಿರಾಮದ ಚುಕ್ಕೆ ಹಾಕುತ್ತೇನೆ. ನಾಳೆ ಬೆಳಿಗ್ಗೆಯ ವರೆಗೂ ಈ ಕೊಠಡಿಯಲ್ಲೇ ಕುಳಿತು ನನ್ನ ಕಲ್ಪನಾ ಸರಪಳಿಯಿಂದ ಕೊಲೆಗಾರನನ್ನು ಊಹಿಸುತ್ತೇನೆ. ನಿಜವಾದ ಸರಿಯಾದ ಸಾಕ್ಷ್ಯಗಳನ್ನು ಕಲ್ಪಿಸುತ್ತೇನೆ."

"ಹಾಗೆಯೇ ಆಗಲಿ."

## ೧೬

"ಶಂಕರ್ ಊರಿಗೆ ಹೊರಟುಹೋದರೋ ಇದ್ದಾರೋ ?"

—ಆ ಆಗುಂತಕ ರಾಮಚಂದ್‌ನನ್ನು ಪ್ರಶ್ನಿಸಿದ.

"ನೀನು ಯಾರು ?"

"ನನ್ನ ಮನೆಯಲ್ಲಿ ಕಳ್ಳತನವಾಗಿತ್ತು, ಅದಕ್ಕೋಸ್ಕರ ಅವರನ್ನು ನೋಡ ಬೇಕಾಗಿತ್ತು."

"ನೀನು ಸುಳ್ಳು ಹೇಳುತ್ತಿದ್ದೀಯ. ಬದ್ಮಾಷ್, ನಿಜ ಹೇಳು."

—ರಾಮಚಂದ್ ಗರ್ಜಿಸಿದ.

ಆ ಆಗಂತಕ ತರತರನೇ ನಡುಗಲಾರಂಭಿಸಿದ.

"ವಿಷಯವೇನು ??

ಅವನು ಕೈನಲ್ಲಿದ್ದ ಒಂದು ಪ್ಯಾಕೆಟ್ಟನ್ನು ರಾಮಚಂದ್‌ನ ಕೈಲಿ ಕೊಟ್ಟ. ರಾಮಚಂದ್ ಅದನ್ನು ಪರೀಕ್ಷಿಸಿದ. ಅದು ಟೈಂ ಬಾಂಬು.

"ಈ ಬಾಂಬು ನಿನಗೆ ಎಲ್ಲಿ ಸಿಕ್ಕಿತು ?"

"ಅದು ಬಾಂಬು ಎನ್ನುವುದೇ ನನಗೆ ತಿಳಿಯದು ಬುದ್ಧಿ."

"ಇದೆಲ್ಲಿತ್ತು?"

"ನಾನು ಹಳ್ಳಿಯವನು ಬುದ್ಧಿ. ಬರ್‍ತಾ ಇದ್ದೆ, ಆ ಸರ್ಕಲ್ಲಿನಲ್ಲಿ ಒಬ್ಬ ದೊಡ್ಡ ಮನುಷ್ಯ ಸಿಕ್ಕಿದ. ಅವನು ಒಂದು ಸಣ್ಣ ಕೆಲಸ ಮಾಡಿದರೆ ನೂರು ರೂಪಾಯಿ ಕೊಡ್ತೀನಿ ಅಂದ. ಈ ಪೊಟ್ಟಣವನ್ನು ನಿಮ್ಮ ಮನೆಒಳಗಿಟ್ಟು ಬಿಡು ಅಂತ ಹೇಳ್ದಾ ಬುದ್ದಿ."

ಅವನ ಮಾತಿನಲ್ಲಿ ಸತ್ಯವಿರುವಂತೆ ರಾಮಚಂದ್‌ಗೆ ತೋರಿತು. ಅವನ

ಮನೆ ವಿಳಾಸ ತಿಳಿದುಕೊಂಡು ನಾಳೆ ಬರುವಂತೆ ಹೇಳಿ ಅವನನ್ನು ಬೇರೆ ದಾರಿಯಲ್ಲಿ ಊರಿಗೆ ಕಳುಹಿಸಿದ.

ಆ ದಿನ ಅನೇಕರು ಶಂಕರ್ ಎಲ್ಲಿ ಎಂದು ಕೇಳಿದರು.

ರಾಮಚಂದ್ ಯಾರಿಗೂ ಶಂಕರ್‌ನ ವಿಷಯವಾಗಿ ಏನನ್ನೂ ಹೇಳಲಿಲ್ಲ. ಎಲ್ಲರ ಪ್ರಶ್ನೆಗೂ ಒಂದೇ ಉತ್ತರ. ಅವನು ಪತ್ತೇದಾರ—ಯಾವಾಗ, ಎಲ್ಲಿಗೆ ಹೋಗುತ್ತಾನೆ ಎಂಬುದನ್ನು ಯಾರಿಗೂ ತಿಳಿಸುವುದಿಲ್ಲ.

ಇತ್ತ ಬೊಂಬಾಯಿ ದಗಾಕೋರನಿಗೆ ತಾನು ಇಟ್ಟಿದ್ದ ವಿಷದ ಸಿಗರೇಟಿನಿಂದ ಶಂಕರ್ ಸತ್ತನೇ ಬಿಟ್ಟನೇ ಎಂಬುದು ತಿಳಿಯಲಿಲ್ಲ. ಆ ಹಳ್ಳಿಯವನು ತಾನು ಕೊಟ್ಟ ಬಾಂಬನ್ನು ರಾಮಚಂದ್‌ನ ಮನೆಯಲ್ಲಿಟ್ಟನೇ ಇಲ್ಲವೇ ಎಂಬ ವಿಷಯವೂ ತಿಳಿಯಲಿಲ್ಲ.

* * * *

ಗಡಿಯಾರ ಐದು ಗಂಟೆಯನ್ನು ಹೊಡೆಯಿತು.

ಹಿಂದಿನ ದಿನ ಅಷ್ಟು ಹೊತ್ತು ಮಲಗಿದ್ದ ಪತ್ತೇದಾರ್ ಶಂಕರ್ ಈದಿನ ಬೆಳಗಿನ ಜಾವ ಐದು ಗಂಟೆಗೇ ಎದ್ದು, ರಾಮಚಂದ್‌ನನ್ನೂ ಎಬ್ಬಿಸಿದ.

"ಏನು ಶಂಕರ್, ಇನ್ನೂ ಬೆಳಕೇ ಹರಿದಿಲ್ಲ ?"

"ನನಗೋಸ್ಕರ ಈ ದಿನ ಕೊಂಚ ಬೇಗ ಏಳಯ್ಯ. ನಾನು ಇವತ್ತು ಊರಿಗೆ ಹೊರಟುಹೋಗುತ್ತೇನೆ. ನಾಳೆಯಿಂದ ನಿನಗೆ ಯಾರೂ ತೊಂದರೆ ಕೊಡುವವರಿರುವುದಿಲ್ಲ."

"ಏನು ವಿಷಯ ಹೇಳಪ್ಪ ?"

"ಆಲಿಯವರಿಗೆ ಈಗಲೇ ಬೇಡಿ ತೆಗೆದುಕೊಂಡು ಬರುವಂತೆ ಹೇಳು.

"ನಾನು ಹೇಳಿದಂತೆ ರಿಕಾರ್ಡಿಂಗ್ ಅರೇಂಜ್‌ಮೆಂಟ್ ಮಾಡಿದ್ದೀಯಾ ತಾನೇ ? ಡಿಕ್ಟಾಫೋನ್ ಇಟ್ಟಿದ್ದೀನಯ್ಯಾ. ನಾನು ಕೆಮ್ಮಿದೊಡನೆ ಸ್ವಿಚ್ ಆನ್ ಮಾಡಬೇಕು. ನೀನೂ, ಆಲಿಯವರೂ ಹಿಂದುಗಡೆ ರೂಮಿನಲ್ಲಿ ಕುಳಿತಿರಿ."

ರಾಮಚಂದ್ ಶಂಕರ್‌ನ ಮಾತಿನಂತೆ ಆಲ್ಲಿಯವರನ್ನು ಕರೆತಂದ

ಆಲಿ ಮತ್ತು ರಾಮಚಂದ್ ಹಿಂದುಗಡೆ ಕೊಠಡಿಯಲ್ಲಿ ಡಿಕ್ಟಾಫೋನಿನ ಮೌತ್ ಮುಂದೆ ಕುಳಿತುಕೊಂಡರು.

ಶಂಕರ್ ಈಸೀಚೇರಿನ ಮೇಲೆ ಆರಾಮವಾಗಿ ಕುಳಿತುಕೊಂಡ.

ಲೀಲಾದೇವಿ ಬಂದಳು.

"ಬನ್ನಿ ಲೀಲಾದೇವಿಯವರೇ."

"ಕೊಲೆಗಾರ ಸಿಕ್ಕನೇ ?"

"ಇಲ್ಲ."

"ವಜ್ರ ಸಿಕ್ಕಿತೇ ?"

"ಇಲ್ಲ."

"ಇನ್ನೇನು ಸಮಾಚಾರ ?"

"ಈ ದಿನ ಊರಿಗೆ ಹೋಗುತ್ತೇನೆ, ಅಷ್ಟೇ ಸಮಾಚಾರ."

ಅರುಗೇಂದ್ರ ಬಂದ.

"ಏನು ಅರುಗೇಂದ್ರ, ಊರಿಗೆ ಹೋಗಲು ಎಲ್ಲಾ ತಯಾರು ಮಾಡಿದ್ದೀಯಾ ತಾನೆ ?"

"ಎಲ್ಲಾ ತಯಾರಾಗಿದೆ."

"ಹಲೋ ಶಂಕರ್, ಎಲ್ಲಿ ನೆನ್ನೆಯೆಲ್ಲಾ ಪತ್ತೆಯಿಲ್ಲ ?"

"ಮೈ ಹುಷಾರಿರಲಿಲ್ಲ, ಮಲಗಿದ್ದೆ. ಕುಳಿತುಕೊಳ್ಳಿ ಚಂದ್ರಕುಮಾರ್."

"ನಿಮ್ಮ ಕೇಸ್ ಮುಗಿಯಿತೇ ?"

"ಕೊಲೆಗಾರನನ್ನು ಈ ದಿನ ಹಿಡಿಯಬೇಕೆಂದಿದ್ದೇನೆ."

"ಕೊಲೆಗಾರನ್ಯಾರು ತಿಳಿಯಿತೇ ?"

"ಓಹೋ ! ತಿಳಿಯಿತು."

"ಯಾರು ?"

"ನೀನು!"

"ಹ್ಞಾ !"

"ಓಡಿಹೋಗಲು ಪ್ರಯತ್ನಿಸಿದರೆ ಗುಂಡು ಹಾರುತ್ತದೆ, ಎಚ್ಚರಿಕೆ ಚಂದ್ರಕುಮಾರ್."

ಶಂಕರ್‌ನ ಕೈನಲ್ಲಿ ರಿವಾಲ್ವರ್ ಇದ್ದಿತು."

"ಶಂಕರ್, ನೀನು ಬುದ್ಧಿವಂತ. ಆದರೆ ಅಷ್ಟೇ ದಡ್ಡ. ನಾನು ಕೊಲೆ ಮಾಡಿರಬಹುದು. ನೀನು ಅದನ್ನು ಕೋರ್ಟಿನಲ್ಲಿ ಸಾಬೀತು ಮಾಡಲಾರೆ."

ಶಂಕರ್ ಬಿದ್ದುಬಿದ್ದು ನಗತೊಡಗಿದ.

ಶಂಕರ್‌ನ ನಗು ಯಾರಿಗೂ ಅರ್ಥವಾಗಲಿಲ್ಲ.

"ದಡ್ಡ ನಾನಲ್ಲ, ನೀನು ಚಂದ್ರಕುಮಾರ್. ಇದುವರೆಗೂ ನೀನು ಮಾಡಿದ ಕೊಲೆಯನ್ನು ರುಜುವಾತು ಮಾಡಲು ಸಾಧ್ಯವಿರಲಿಲ್ಲ. ಈಗ ನೀನೇ ನನಗೆ ಸರಿಯಾದ ಸಾಕ್ಷ್ಯವನ್ನು ಒದಗಿಸಿದೆ. "ನಾನು ಕೊಲೆಮಾಡಿರಬಹುದು" ಎಂದು ನೀನು ಹೇಳಿದೆ. ಈ ಕೊಠಡಿಯಲ್ಲಿ ಡಿಕ್ಟಾಫೋನಿದೆ. ನಾವು ಆಡಿದ ಪ್ರತಿಯೊಂದು ಮಾತುಗಳೂ ರೆಕಾರ್ಡ್ ಆಗುತ್ತಿದೆ."

ಚಂದ್ರಕುಮಾರ್ ಬಾಗಿಲ ಕಡೆ ಓಡಿದ.

ಆಲಿಯಾಸರು ಅವನಿಗೆ ಎದುರಾಗಿ ರಿವಾಲ್ವರ್‌ಧಾರಿಯಾಗಿ ಬಂದು ಚಂದ್ರಕುಮಾರನ ಕೈಗೆ ಬೇಡಿ ತೊಡಿಸಿದರು. ಅವನು ತಲೆ ತಗ್ಗಿಸಿಕೊಂಡು ಸೋಫದ ಮೇಲೆ ಕುಳಿತುಕೊಂಡ."

"ನೀನು ಮಾಡಿದ ಕೊಲೆಗೆ ಒಂದಲ್ಲ ಹತ್ತಾರು ಸಾಕ್ಷಿಗಳಿವೆ."

ಶಂಕರ್ ಅವನ ಕೂಲಿಂಗ್ ಗ್ಲಾಸನ್ನು ಕಿತ್ತುಹಾಕಿದ

ಅವನ ಗಾಜಿನ ಗೋಲಿಯಂಥ ನೀಲಿಯ ಕಣ್ಣುಗಳು ಎಲ್ಲರಿಗೂ ಗೋಚರಿಸಿತು.

"ಈ ನೀಲಿಯ ಕಣ್ಣುಗಳನ್ನು, ಈ ವಿಸ್ನಾಟಿಸಮ್ ನಯನಾಸ್ತ್ರಗಳನ್ನು ಅರುಗೇಂದ್ರ ಗುರುತಿಸಬಲ್ಲ, ಲೀಲಾದೇವಿ ಗುರುತಿಸಬಲ್ಲಳು ಡಿಟರ್‌ಜೆಂಟಿನ ಬಾಟಲ್ ಕಾರ್ಕಿನ ಮೇಲೆ ನಿನ್ನ ಬೆರಳಿನ ಗುರುತುಗಳಿವೆ. ಕರ್ಚೀಫಿನ ಮೇಲೆ ನಿನ್ನ ಬೆರಳು ಗುರುತಿದೆ.

"ನೀನು ಚೈನು ಎಳೆದು ರೈಲನ್ನು ನಿಲ್ಲಿಸಿದೆ. ಆತುರದಲ್ಲಿ ಚೈನಿನ ಮೇಲಿದ್ದ ಬೆರಳಿನ ಗುರುತನ್ನು ಅಳಿಸಲು ಮರೆತೆ. ನಿನ್ನ ಈ ಮನೆಯಿಂದ ಮಾತುಂಗಾದ ಸುಟ್ಟುಹೋದ ಮನೆಗಿರುವ ಸುರಂಗವೂ ನೀನು ಕೊಲೆಗಾರ, ದಗಾಕೋರ ಎಂಬುವಕ್ಕೆ ಸಾಕ್ಷಿಯಾಗಿದೆ.

"ಅತಿಮುಖ್ಯವಾಗಿ, ನಿನ್ನ ಮನೆಯಲ್ಲಿ "ಜೈಪ್ರಕಾಶ್" ವಜ್ರವೊಂದಿದೆ."

"ಸುಳ್ಳು....ಅದು ನನ್ನ ಬಳಿಯಿಲ್ಲ."

"ಅದು ನಿನ್ನ ಬಳಿ ಇದೆ."

"ಇರಬಹುದು–ಆದರೆ ನಾನು ಸತ್ತರೂ ಸರಿ ಅದಿರುವ ಜಾಗವನ್ನು

ನಿನಗೆ ತೋರಿಸುವುದಿಲ್ಲ ಶಂಕರ್."

"ನಾವು ನಿನ್ನನ್ನು ತೋರಿಸು ಎಂದು ಕೇಳುವುದಿಲ್ಲ ಚಂದ್ರಕುಮಾರ್."

"ಆ ಸ್ಥಳವನ್ನು ನೀನು ಕಂಡುಹಿಡಿಯಲಾರೆ."

"ನಾನು,ನೀನು ತಿಳಿದುಕೊಂಡಿರುವಷ್ಟುಮೂರ್ಖನಲ್ಲ ಚಂದ್ರಕುಮಾರ್. ವಿಷದ ಸಿಗರೇಟು, ಕೈ ಬಾಂಬು, ಎಲ್ಲಾ ಅಪಾಯದಿಂದಲೂ ದಾಟಿಕೊಂಡು ಬಂದು ನಿನ್ನ ಕೈಗೆ ಬೇಡಿ ತೊಡಿಸಿದ್ದೇನೆ. ಆ ವಜ್ರವನ್ನೂ ಖಂಡಿತ ಕಂಡು ಹಿಡಿಯುತ್ತೇನೆ."

"ಅದು ಅಸಾಧ್ಯ ಶಂಕರ್, ನೀನು ನನಗೆ ವಿಚಿತ್ರ ಶಿಕ್ಷೆಯನ್ನು ಕೊಟ್ಟು ಬಾಯಿಬಿಡಿಸಲು ಪ್ರಯತ್ನಿಸಬಹುದು. ನಾನು ಗಲ್ಲುಗಂಬವನ್ನು ಹತ್ತುವು ದಂತೂ ಖಂಡಿತ. ನಾನು ಮಾತ್ರ ನಿನಗೆ 'ಜೈಪ್ರಕಾಶ್' ವಜ್ರವಿರುವ ಸ್ಥಳ ವನ್ನು ಹೇಳುವುದಿಲ್ಲ."

ಆಲಿಯವರು ಮಾತನಾಡಿದರು—

"ನಾನು ನಿನ್ನ ಬಾಯಿ ಬಿಡಿಸುತ್ತೇನೆ. ಪಂಟಿಂಗ್‌ನ ಹೊಡೆತ, ಸೂಜಿಯ ಚುಚ್ಚು ನಿನ್ನ ಬಾಯಿ ಬಿಡಿಸುತ್ತದೆ."

"ಆಲಿಯವರೇ ನನ್ನ ವಿಷಯ ನಿಮಗೆ ತಿಳಿಯದು. ನಾನು ಮೂರ್ಖ ತನದಲ್ಲಿ ನಿಮ್ಮ ಕೈನಲ್ಲಿ ಸಿಕ್ಕಿ ಹಾಕಕೊಂಡೆ. ಇನ್ನೆರಡು ದಿನ ನಾನು ನಿಮ್ಮ ಕೈಗೆ ಸಿಕ್ಕಿ ಹಾಕಿಕೊಳ್ಳದೇ ಇದ್ದಿದ್ದರೆ ಪತ್ತೇದಾರ್ ಶಂಕರ್ ಮೇಲು ಲೋಕ ದಲ್ಲಿರುತ್ತಿದ್ದ. ಅವನ ಅದೃಷ್ಟದಿಂದ ವಿಷದ ಸಿಗರೇಟಿನಿಂದ ತಪ್ಪಿಸಿಕೊಂಡ."

"ಈಗ ನಮಗೆ ಬೇಕಾಗಿರುವುದು ಜೈಪ್ರಕಾಶ್ ವಜ್ರ. ಅದೆಲ್ಲಿದೆ ಬೊಗಳೋ ಎಂದರೆ ಬಾಯಿಗೆ ಬಂದದ್ದನ್ನೆಲ್ಲಾ ಬೊಗಳುತ್ತಾ ಇದ್ದಾನೆ."

"ಅದು ಮಾತ್ರ ನಿಮಗೆ ನಾನು ಹೇಳುವುದಿಲ್ಲ."

"ನೀನು ಹೇಳದಿದ್ದರೆ ನಮಗೆ ತಿಳಿಯಲು ಸಾಧ್ಯವಿಲ್ಲವೇ ?" ಶಂಕರ್ ನಗುತ್ತಾ ಹೇಳಿದ.

"ಆ ರಹಸ್ಯ ನನಗಲ್ಲದೆ ಬೇರೆ ಯಾರಿಗೂ ತಿಳಿಯದು. ನನ್ನೊಡನೆಯೇ ಆ ರಹಸ್ಯವೂ ಸಾಯುತ್ತದೆ. ಅದನ್ನು ಕಂಡು ಹಿಡಿಯುವಂಥ ಬುದ್ಧಿವಂತ ರ್‍ಯಾರೂ ನಿಮ್ಮಲ್ಲಿಲ್ಲ. ಆ ವಿಷಯದಲ್ಲಿ ಯಾವ ಸಂಶಯವೂ ಇಲ್ಲ."

"ಆಲಿಯವರೇ, ಚಂದ್ರಕುಮಾರ್ ವಜ್ರವಿಟ್ಟಿರುವ ಸ್ಥಳ ನನಗೆ ಗೊತ್ತು."

ಶಂಕರ್ ನಗುತ್ತಾ ಹೇಳಿದ.

ಶಂಕರ್‌ನ ಮಾತನ್ನು ಕೇಳಿ ಚಂದ್ರಕುಮಾರ್ ಗಹಗಹಗಹಿಸಿ ನಗ ತೊಡಗಿದ.

"ನಿನ್ನ ಎದುರಿನಲ್ಲೇ "ಜೈಪ್ರಕಾಶ್" ವಜ್ರವನ್ನು ತರುತ್ತೇನೆ."

"ನೋಡೋಣ ನಿನ್ನ ಸಾಮರ್ಥ್ಯವನ್ನು."

—ಚಂದ್ರಕುಮಾರ್ ವ್ಯಂಗಬೆರೆತ ಧ್ವನಿಯಲ್ಲಿ ಹೇಳಿದ.

ಶಂಕರ್ ಸೀದ ಹೊರಗೆ ಹೋದ. ಚಂದ್ರಕುಮಾರ್‌ನ ಮನೆಯನ್ನು ಪ್ರವೇಶಿಸಿದ.

ಎಲ್ಲರೂ ಕುತೂಹಲತುಂಬಿದ ಮನಸ್ಸಿನಿಂದ ಶಂಕರ್‌ನ ಬರವನ್ನೇ ಎದುರು ನೋಡುತ್ತಾ ಕುಳಿತಿದ್ದರು.

ಶಂಕರ್ ಅವರನ್ನು ತುಂಬಾ ಹೊತ್ತು ಕಾಯಿಸಲಿಲ್ಲ. ಕೇವಲ ಐದು ನಿಮಿಷಗಳಲ್ಲೇ ಬಂದ.

ಅವನು ಬರಿಗೈನಲ್ಲಿ ಹೋದ. ಆದರೆ ಬರುವಾಗ ಕೈನಲ್ಲಿ ಒಂದು ಕೋಳಿಯನ್ನು ಹಿಡಿದುಕೊಂಡು ಬಂದ. ಆ ಕೋಳಿಯ ಕಾಲಿಗೆ ಒಂದು ಸಣ್ಣ ಕೆಂಪುದಾರ ಕಟ್ಟಿದ್ದಿತು. 'ಜೈಪ್ರಕಾಶ್' ವಜ್ರವನ್ನು ತರುವುದಾಗಿ ಹೋದ ಶಂಕರ್ ಕೋಳಿಯನ್ನು ತಂದುದ್ದನ್ನು ಕಂಡು ಅಲ್ಲಿದ್ದವರೆಲ್ಲರ ಮುಖ ದಲ್ಲೂ ಆಶ್ಚರ್ಯದ ಭಾವ ಕಂಡುಬಂದಿತು. ಆದರೆ....ಚಂದ್ರಕುಮಾರ್‌ನ ಮುಖದಲ್ಲಿ ಮಾತ್ರ ಪೆಚ್ಚು ಕಳೆ ಮೂಡಿತು.

ಶಂಕರ್ ಕೋಳಿಯನ್ನು ಮೇಜಿನಮೇಲಿಟ್ಟು ಹರಿತವಾದ ಕತ್ತಿಯದಲ್ಲಿ ಅದನ್ನು ಎರಡು ಭಾಗವಾಗಿ ಕತ್ತರಿಸಿದ.

ರಕ್ತಮಯವಾಗಿ ಫಳಫಳನೆ ಮಿಂಚುತ್ತಿದ್ದ "ಜೈಪ್ರಕಾಶ್" ವಜ್ರ ಪ್ರಕಾಶಮಾನವಾಗಿ ಬೆಳಗಿ ಎಲ್ಲರ ಕಣ್ಣನ್ನು ಕುಕ್ಕಿತು.

ಎಲ್ಲರೂ ವಿಸ್ಮಯದಿಂದ ಅದನ್ನೇ ನೋಡುತ್ತಿದ್ದರು.

ಶಂಕರ್ ಕೈ ತೊಳೆದುಕೊಂಡು ಸಿಗರೇಟು ಹಚ್ಚಿದ.

ಆಲಿಯವರು ಚಂದ್ರಕುಮಾರನೊಡನೆ ಪೋಲೀಸ್ ವ್ಯಾನು ಹತ್ತಿದರು.

"ಈ ಮೊಕದ್ದಮೆಯಲ್ಲಿ ನಾನು ಪ್ರವೇಶಿಸಿದ್ದು "ಕೊಲೆಪಾತಕಿ ನಾನಲ್ಲ" ಎಂದು ಹೇಳಿಕೊಂಡು ಬಂದ ಲೀಲಾದೇವಿಯಿಂದ."

"ಅದಕ್ಕೆ?"

"ಅವಳಿಗೆ ಒಂದು ಶಿಕ್ಷೆ ಕೊಡಬೇಕು."

"ಏನು ?"

"ಅವಳು ಸಾಯುವ ತನಕ ಅರುಗೇಂದ್ರನ ಬಂಧಿಯಾಗಿ ಬಾಳಬೇಕು."

"ಶಿಕ್ಷೆಯನ್ನು ಅನುಭವಿಸಲು ಒಪ್ಪಿಗೆ ತಾನೇ ?"

ರಾಮಚಂದ್ ಲೀಲಾದೇವಿಯನ್ನು ಪ್ರಶ್ನಿಸಿದ.

ಅವಳು ನಗುತ್ತಾ ಅರುಗೇಂದ್ರನ ಕಡೆ ನೋಡಿದಳು.

* * * *

"ನಿನಗೆ ಚಂದ್ರಕುಮಾರನ ಮೇಲೆ ಮೊದಲಿನಿಂದಲೂ ಕಣ್ಣಿದ್ದಿತೇ ಶಂಕರ್ ?"

"ಹೌದು."

"ಅದು ಹೇಗೆ ?"

"ನಾನು ಊರಿಗೆ ಬಂದ ದಿನ ಅವನೊಡನೆ ಹೋದೆ. ಅವನು ಗೇಟ್ ವೇ ಆಫ್ ಇಂಡಿಯಾದ ಬಳಿ ಹೋಗಬೇಕು ಎಂದು ಹೇಳಿ, ಚೌಪಾತಿಯ ಬಳಿ ನನಗೆ ಸಿಕ್ಕಿದ. ಆ ದಿನವೇ ಇವನ ಗ್ಯಾಂಗಿನವರು ಹಣವನ್ನು ಸಮುದ್ರಕ್ಕೆ ಎಸೆದದ್ದು. ಎರಡನೆಯದಾಗಿ ಆ ದಿನ ನಾವೆಲ್ಲಾ ಮಾತನಾಡುತ್ತಾ ಕುಳಿತಿದ್ದಾಗ ಒಬ್ಬ ವ್ಯಕ್ತಿ ನಮ್ಮ ಮಾತನ್ನು ಕದ್ದು ಕೇಳುತ್ತಾ ನಿಂತಿದ್ದು ಓಡಿಹೋದ. ನೀನು ಹೊರಗೆ ಹೋದಾಗ ಅವನು ನಿನ್ನ ಕಣ್ಣಿಗೆ ಬೀಳಲಿಲ್ಲ. ನೀನು ಹೋಗುವಷ್ಟರಲ್ಲಿ ಅವನು ಈ ಬೀದಿಬಿಟ್ಟು ಓಡಿಹೋಗುವುದು ಅಸಾಧ್ಯ. ಅದಕ್ಕೆ ಕಾರಣ ನೀನು ಓಡಿಹೋಗುವುದಕ್ಕೂ, ಅವನು ಓಡಿಹೋಗಿದ್ದಕ್ಕೂ ಎರಡೇ ನಿಮಿಷ ವ್ಯತ್ಯಾಸ. ನೀನು ಆ ದಿನ ಚಂದ್ರಕುಮಾರನನ್ನು ಕಂಡೆ. ಅವನು ಯಾವನೋ ಸೈಕಲ್ಲಿನ ಮೇಲೆ ಹೋದ ಅಂತ ನಂಬಲರ್ಹವಾದ ಕಾರಣವನ್ನು ಕೊಟ್ಟ.

"ನಾನು ಚಂದ್ರಕುಮಾರನ ಮನೆಗೆಹೋಗಿ ಅವನು ಮನೆಯಲ್ಲಿ ಮುಟ್ಟಿರುವಂಥ ಕೆಲವು ವಸ್ತುಗಳನ್ನು ತಂದು ಅದರ ಮೇಲಿನ ಬೆರಳಿನ ಗುರುತಿಗೂ ಜರ್ನಲಿಸ್ಟ್ ಶೇಷಗಿರಿ ತಂದಿದ್ದ ಬೆರಳಿನ ಗುರುತಿಗೂ ಹೋಲಿಸಿ ನೋಡಿದಾಗ

ಎರಡು ಒಂದೇ ಆಗಿದ್ದಿತು. ಆಗ ನನಗೆ ಅವನ ಮೇಲಿದ್ದ ಸಂಶಯ ಸರಿಯಾದ ಸಾಕ್ಷಿಯಿಂದ ಪೂರ್ಣವಾಗಿ ಮತ್ತಷ್ಟು ದೃಢವಾಯಿತು."

"ನೀನು ಬಹಳ ಬುದ್ಧಿವಂತ ಶಂಕರ್."

"ಬಹಳ ಥ್ಯಾಂಕ್ಸ್ ನಿನ್ನ ಪ್ರಶಸ್ತಿಗೆ."

"ಪ್ರಯಾಣ ಯಾವತ್ತು ?"

"ನಾಳೆ."

* * * *

ಅರುಗೇಂದ್ರವಿಜಯ ಮತ್ತು ಲೀಲಾದೇವಿಯವರ ಮದುವೆ ಮುಂದಿನ ತಿಂಗಳು ಹತ್ತನೇ ತಾರೀಕು ಮೈಸೂರು 'ರಾಜಛತ್ರದಲ್ಲಿ' ನಡೆಯುತ್ತದೆ. ತಾವುಗಳೆಲ್ಲಾ ದಯವಿಟ್ಟು ಬರಬೇಕು ಅಂತ ಕೋರುತ್ತೇನೆ. ಬರುತ್ತೀರಾ ತಾನೇ ?

ಸಂಪೂರ್ಣಂ.